# ಕೊಡಗು  ಸಂಗಾತಿ

ಸಪ್ಟೆಂಬರ್ 1 ರಿಂದ 30, 2002 ಪಾಕ್ಷಿಕ ಪತ್ರಿಕೆ ( ಸೋಣ 16-31 ನಿರ್ನಾಲ್ 1-14, )

1055c, ದೊಡ್ಡಣ್ಣ ಬಿಲ್ಡಿಂಗ್ಸ್, ಹುಣಸೂರು ರಸ್ತೆ, ಹಿನ್‌ಕಲ್ಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡ ಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 6 ಸಂಚಿಕೆ : 11-12 ಪುಟಗಳು : 24 ಬೆಲೆ ರೂ. : 12-00

ಲೇಖನ : ಒಳಪುಟದಲ್ಲಿ.

## ಭಾರತದ ಈಶಾನ್ಯ ಗಡಿ ಅರುಣಾಚಲ ಪ್ರದೇಶದಲ್ಲಿ ಹಿಮಪಾತಕ್ಕೆ ಬಲಿ.

## "ಕೊಡಗಿನ ಯೋಧ ಕುಯ್ಯಮುಡಿ ಪೊನ್ನಪ್ಪ ಬೆಳ್ಳಿಯಪ್ಪ (ಬೆಲ್ಲು)"

ಜುಲೈ ತಿಂಗಳ 23-24 ರಂದು ಮಂಡ್ಯದಲ್ಲಿ ಜರುಗಿದ ಕಾವೇರಿ ಉತ್ಸವದಲ್ಲಿ ಕೊಡಗು ಗೌಡ ಮಹಿಳಾ ಒಕ್ಕೂಟದ ಸಾಂಸ್ಕೃತಿಕ ಕೋಲಾಟದಲ್ಲಿ ನಿರತರಾದ ಶೋಡಶಿಯರು.



ಕಾವೇರಿ ಉತ್ಸವದಲ್ಲಿ ಪಾಲ್ಗೊಂಡ ಗೌಡವತಿಯರು.



ನಿಂತವರು : ಪಾರೆಮಜಲು ದೇವಮ್ಮ, ಬೈತಡ್ಕ ದೇವಮ್ಮ, ಮಂಞ್ಙಾಂಡ್ರ ರೇಖಾ, ಕುಟ್ಟನ ಲತ, ಕೇಕಡ ರಾಣಿ, ಪಾರೆಮಜಲು ಸ್ವಾತಿ, ಬಾಕಿಲನ ಜಸ್ಮಿ, ದಬ್ಬಡ್ಕ ಕಾಂತಿ, ಕೋಳುಮುಡಿಯನ ಗಂಗಮ್ಮ, ಪಟ್ಟಡ ನೇತ್ರ, ಬೈತಡ್ಕ ಜಾನಕಿ (ತಂಡದ ನಿರ್ದೇಶಕಿ.)

ಕುಳಿತವರು : ಬೈತಡ್ಕ ತುಳಸಿ, ಪಾರೆಮಜಲು ಜ್ಯೋತಿ, ಕೋಳುಮುಡಿಯನ ನೂತನ್, ಬಾರಿಕೆ ಟ್ರೆಸಿಲ್ಲಾ, ಪಟ್ಟಡ ಪವನ, ಅಮೆ ಲೀನ

ಇವರೊಂದಿಗೆ, ಕೊಡಗು ಸಂಗಾತಿಯ ಗೌರವ ಸಂಪಾದಕ ಪಟ್ಟಡ ಪ್ರಭಾಕರ ಮತ್ತು ಕೊಡಗು ಗೌಡ ಸಮಾಜದ ನಿರ್ದೇಶಕ ಕಾಳೇರಮ್ಮನ ಪಾಲಾಕ್ಷ ಮತ್ತು ಇತರರು.



# 2002, ಸೆಪ್ಟಂಬರ್ 1 ರಿಂದ 30ರ ತನಕ

## ಒಳನೋಟ 



| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | ಕೊಡಗು ಸಂಗಾತಿ,1055c, ದೊಡ್ಡಣ್ಣ ಬಿಲ್ಡಿಂಗ್, ಹುಣಸೂರು ರಸ್ತೆ, ಅಂಚೆ ಕಛೇರಿ ಎದುರು, ಹಿನಕಲ್ ಅಂಚೆ, ಮೈಸೂರು - 17.ಫೋನ್:**0821/404290** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಪ್ಪೆ, ಹಸೆಮಣೆ / ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ಸ್ ಈ ಚೈನ್ ಲಭ್ಯ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/228047** |
| | ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್ : 08272/229620 |
| ವಿರಾಜಪೇಟೆ | ಚಾರಿಕೆ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/456591 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/673370 |
| ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19, ಫೋನ್ : 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **12**ರೂ.

ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), **ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.**

# ಸಂಪಾದಕೀಯ :

## ಅಭಿವೃದ್ಧಿ ಪಥದತ್ತ ಗೌಡ ಜನಾಂಗ

ನಿಂತ ನೀರಂತಿದ್ದ ಗೌಡ ಜನಾಂಗ, 1997 ರಿಂದ ಏಕಾ ಏಕಿ ಚಲಿಸಲಾರಂಭಿಸಿ ಈಗ ತನ್ನ ವೇಗವನ್ನು ಹೆಚ್ಚಿಸಿಕೊಂಡಿದೆ. ಅಂದು ಗೌಡ ಜನಾಂಗವಿತ್ತು, ಅದರಲ್ಲಿ ಶಾಸ್ತ್ರ ಸಂಪ್ರದಾಯಗಳೂ ಇತ್ತು, ಕಾಲ ಬದಲಾಗುತ್ತಾ ಬಂದ ಹಾಗೆಯೇ, ಕಾಲದ ಮಹಿಮೆಯೊ ಅಥವ ಪಾಶ್ಚಿಮಾತ್ಯ ಅಥವ ಅನ್ಯ ಸಂಸ್ಕೃತಿಯ ಸೆಳೆತವೊ ಏನೊ, ನಮ್ಮ ಬಾಷೆ ಮಾತನ್ನಾಡುವುದೇ ಅವಹೇಳನ ಎಂಬಂತೆ ಜನರಾಡುತ್ತಿದ್ದರು. ಸಾಂಸ್ಕೃತಿಕ ಚಟುವಟಿಕೆ ಇಲ್ಲವೆ ಇಲ್ಲವೇನೊ ಎಂಬಂತಾಗಿತ್ತು.

ಆದರೆ, ಈಗ ಆ ನಡುವಳಿಕೆ ಕಾಣುತ್ತಿಲ್ಲ, ನಾವು ನಮ್ಮದು, ನಮ್ಮ ಜನಾಂಗ ಎಂಬ ಅಭಿಮಾನ ಎದ್ದು ಕಾಣುತ್ತಿದೆ. ಸಾಂಸ್ಕೃತಿಕ ಚಟುವಟಿಕೆಗಳು ಸಹ ದಿನದಿಂದ ದಿನಕ್ಕೆ ಹೆಚ್ಚುತ್ತಿವೆ. ಚಿಕ್ಕವರಿಂದ ಹಿಡಿದು, ವೃದ್ಧರಾದಿಯಾಗಿ ಉತ್ಸಾಹದಿಂದ ಭಾಗವಹಿಸುತ್ತಿದ್ದಾರೆ. ಎಲ್ಲಾ ಕಾರ್ಯಕ್ರಮಗಳಲ್ಲೂ ಎಲ್ಲೆಡೆಯಿಂದ ಬಂದು ಭಾಗ ವಹಿಸುತ್ತಿದ್ದಾರೆ. ಅವರವರದೆ ಆದ ಸಂಘ ಸಂಸ್ಥೆಗಳಿವೆ.

ಇಂದು ಗೌಡ ಜನಾಂಗ ಕ್ರೀಡೆಯಲ್ಲೂ ಅತ್ಯುತ್ಸಾಹ ತೋರುತ್ತಿದೆ. ಹಲವಾರು ಕುಟುಂಬಗಳು ಆ ಕುಟುಂಬದ ಹೆಸರಿನ 'ಕಪ್' ಇಟ್ಟು ನಮ್ಮ ಯುವ ಕ್ರಿಕೆಟಿಗರಿಗೆ ಉತ್ತೇಜನ ನೀಡುತ್ತಿವೆ. ಕೆಸರು ಗದ್ದೆ ಆಟೋಟಗಳಂತೂ ಮನರಂಜನೀಯ. ಇಂತಹ ಕ್ರೀಡೆಗಳಲ್ಲಿ ಭಾಗ ವಹಿಸುವುದೂ, ಪ್ರೇಕ್ಷಕರಾಗಿ ಹೋಗುವುದು ಎರಡೂ ಅಭಿವೃದ್ಧಿ ಸಂಕೇತ. ಇಂತಹ ಸಮಯದಲ್ಲಿ ಬಂಧು - ಮಿತ್ರರು ಭೇಟಿಯಾಗುವುದು, ಹಳೆ ನೆನಪುಗಳನ್ನು ಮೆಲುಕು ಹಾಕುವುದು ಅಹಾ! ಎಂತಹ ಸುಂದರ. ಇಂತಹ ಭೇಟಿಗಳು ಸೌಹಾರ್ದತೆಯನ್ನು ಹೆಚ್ಚಿಸುತ್ತವೆ. ಸಂಬಂಧವನ್ನು ಕುದುರಿಸುತ್ತದೆ.

ನಮ್ಮಲ್ಲಿ ಬರಹಗಾರರು, ಜನಾಂಗದ ಬಗ್ಗೆ ಚಿಂತನೆ ಮಾಡುವುದು ದಿನ ದಿನಕ್ಕೂ ಹೆಚ್ಚುತ್ತಿರುವುದು ಸಾಹಿತ್ಯಾಶಕ್ತಿ ಮೂಡುತ್ತಿರುವುದು ಒಂದು ಶುಭ ಸೂಚನೆ. ನಮ್ಮ ಜನಾಂಗದ ಬರಹಗಾರರಿಗೆ ಬರವಣಿಗೆಗೆ ಒಂದು ವೇದಿಕೆ ಕಲ್ಪಿಸಿ ಕೊಟ್ಟಿರುವುದು, ಕೊಡಗು ಸಂಗಾತಿ ಎಂದು ಹೇಳಿದರೆ ತಪ್ಪಾಗಲಾರದು.

ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ನಮ್ಮ ಜನಾಂಗ ದಿನದಿಂದ ದಿನಕ್ಕೆ ಅಭಿವೃದ್ಧಿಯ ಹಾದಿಯತ್ತ ಸಾಗುತ್ತಿದೆ. ಇದು ಮುಂದೆಯು ಹೀಗೆ ಉಳಿದು, ಬೆಳೆಯಲಿ ಎಂದು ಸಂಗಾತಿ ಶುಭವನ್ನು ಹಾರೈಸುತ್ತದೆ.

## ಅತಂತ್ರತೆಯ ಸುಳಿಯಲ್ಲಿ ಕೊಡಗಿನ ರೈತರು.

ಕೊಡಗಿನಲ್ಲಿ ಈ ವರ್ಷ ಬರಗಾಲವೇ ಸರಿ ಎಂದು ನಿರ್ಧರಿಸಿ ಬಿಟ್ಟಿದ್ದರು. ಮಾಡಿದ ಸಾಲ ಸೋಲಗಳನ್ನು ನೆನೆದು ರೈತರು ತಲೆ ಮೇಲೆ ಕೈ ಹೊತ್ತು ಕುಳಿತು ಬಿಟ್ಟಿದ್ದರು. ದೇಶದ ಬೆನ್ನೆಲುಬು ಆದ ರೈತರ ಬೆನ್ನೆಲುಬೆ ಮುರಿಯುವ ಸ್ಥಿತಿ ಬಂದು ಬಿಟ್ಟಿದೆ. ಕೊಡಗಿನ ಕೆಲವೆಡೆ ಮಳೆ ಆಗಿ ನಾಟಿ ಮುಗಿದರೂ, ಇನ್ನು ಹಲವಡೆ ಭತ್ತದ ಪೈರಿಗೆ 2 ತಿಂಗಳು ಮುಗಿಯುತ್ತಾ ಬಂದರೂ ಮಳೆ ಇಲ್ಲದೆ, ಚಿಂತಾಕ್ರಾಂತರಾಗಿ ರೈತರು ಕುಳಿತು ಬಿಟ್ಟಿದ್ದಾರೆ. ಈಗ ತಾನೆ ಚಿಗುರುತ್ತಿರುವ ಮುಂಗಾರಿಗೆ ವರ್ಷದ ಹಿಟ್ಟಿಗಾದರು ಸ್ವಲ್ಪ ಮಾಡಿಕೊಳ್ಳುವ ಎಂಬ ಬಯಕೆಯೊಂದಿಗೆ, ಸ್ವಲ್ಪ ಚೇತರಿಕೆ ತಂದು ಕೊಂಡು ನಾಟಿ ಮಾಡ ಹತ್ತಿದ್ದಾರೆ.

ನಮ್ಮ ರೈತರಿಗೆ ಎತ್ತ ನೋಡಿದರೂ ದಾರಿ ಕಾಣದಾಗಿದೆ. ಅವನು ಬೆಳೆದ ಕಾಫಿ, ಕರಿಮೆಣಸು, ಏಲಕ್ಕಿ, ಭತ್ತ ಯಾವುದಕ್ಕೂ ಕನಿಷ್ಠ ಬೆಲೆ ಇಲ್ಲದಾಗಿದೆ. ಸೊಸೈಟಿ ಸಾಲವೇ ಬೃಹದಾಕಾರವಾಗಿ ಬೆಳೆಯುತ್ತಿದೆ. ಹೀಗೆ ಹತ್ತು ಹಲವು ಕಷ್ಟ ಕೋಟಲೆಗಳ ನಡುವೆ ನಮ್ಮ ರೈತರ ಬದುಕು ಅತಂತ್ರತೆಯತ್ತ ಸಾಗುತ್ತಿದೆ.

ಕಾಫಿ ಮೆಣಸಿಗೆ ಬೆಲೆಯಿದ್ದ ಕಾಲವೊಂದಿತ್ತು. ಇದೆ ರೈತರು ಮುಂದೆಯೂ, ಹೀಗೆ ಇರಬಹುದೆಂಬ ಕುರುಡು ನಂಬಿಕೆಯೊಂದಿಗೆ, ಬಹು ವೈಭವದಿಂದ ಕಾಲ ಕಳೆದರು. ಮನೆಗೆ ತಲೆಗೊಬ್ಬರಿಗಂತೆ ವಾಹನಗಳು, ಭವಿಷ್ಯತ್ತಿಗೆ ಕೂಡಿಡಬೇಕೆಂಬ ಯೋಚನೆಯೇ ಇಲ್ಲದೆ, ನೆಂಟರು ನಾಡುಗಳೆಂದು ಖರ್ಚು ಮಾಡಿದ್ದೆ ಮಾಡಿದ್ದು.

ಆದರೆ ಇಂದು, ಹೊಟ್ಟೆಗೆ ಒಂದಿಷ್ಟು ಹಿಟ್ಟು ಒದಗಿಸಿಕೊಳ್ಳುವುದೆ ಕೊಡಗಿನ ರೈತರಿಗೆ ಚಿಂತೆ ಯಾಗಿ ಬಿಟ್ಟಿದೆ. ವಾಹನಗಳಿಗೆ ಪೆಟ್ರೋಲ್ ಹಾಕಲೂ ಹಣವಿಲ್ಲದೆ ಮೂಲೆ ಕುಳಿತುದಲ್ಲದೆ ಹಲವು ಮಾರಾಟವಾದವು. ರೈತ ಮಹಿಳೆಯರ ಒಡವೆಗಳೆಲ್ಲಾ ಮಾರವಾಡಿಯತ್ತಲೂ, ಬ್ಯಾಂಕಿನತ್ತಲೂ ನಡೆದು ಬಿಟ್ಟಿದೆ. ರೈತರು ಕೈ ಚೆಲ್ಲಿ ಆಗಸದತ್ತ ಮುಖ ಮಾಡಿ ಕುಳಿತಿರುವುದರಲ್ಲಿ ಆಶ್ಚರ್ಯವೇನಿಲ್ಲ.

ಭವಿಷ್ಯದಲ್ಲಿ ಹೊಂಗೀರಣ ಮೂಡಲಿ ಎಂದು ಸಂಗಾತಿ ಹಾರೈಸುತ್ತದೆ.

## ಅಂತ್ಯ

ಆಕಾಶಕ್ಕೆ ಅಂತ್ಯವೆಲ್ಲಿ ?, ನಕ್ಷತ್ರಕ್ಕೆ ಲೆಕ್ಕವೆಲ್ಲಿ ?
ಸ್ನೇಹಕ್ಕೆ ಕಡೆಯೆಲ್ಲಿ ?, ನದಿಗೆ ನೆಲೆಯೆಲ್ಲಿ ?
ಗಾಳಿಗೆ ವಾಸನೆಯೆಲ್ಲಿ ?, ಪ್ರೀತಿಗೆ ಕೊನೆಯೆಲ್ಲಿ ?
ನನಗೆ ಕೊಡಗು ಸಂಗಾತಿಯೆಲ್ಲಿ ?

- ಕುಂಜಿಲನ ನವೀನ್ ಚಣ್ಣಪ್ಪ, ಪುತ್ತೂರು

ಕೂತು ಉಣ್ಣುವವನಿಗೆ ಕುಡಿಕೆ ಹೊನ್ನು ಸಾಲದು

# ಹಿಮಪಾತಕ್ಕೆ ಬಲಿಯಾದ ಕೊಡಗಿನ ಯೋಧ ಕುಯ್ಯಮುಡಿ ಪೊನ್ನಪ್ಪ ಬೆಳ್ಳಿಯಪ್ಪ.

ಇದೆ 2002 ರ ಅಗಸ್ಟ್ 4 ರಂದು ಭಾನುವಾರ ಬೆಳಿಗ್ಗೆ ತಮ್ಮ ಸಹದ್ಯೋಗಿಗಳೊಡನೆ ಅರುಣಾಚಲ ಪ್ರದೇಶದ ತೇಂಗಾ ಗ್ರಾಮದಲ್ಲಿ ಹಿಮಾವೃತ್ತದಲ್ಲಿ ಸಿಲುಕಿ ತೊಂದರೆ ಪಡುತ್ತಿದ್ದ ಜನರಿಗೆ ಶುಶ್ರೂಷೆ ನೀಡಿ ಮರಳಿ ಬಂದು, ಪುನಃ ಯಾರಾದರು ಜನರು ತೊಂದರೆಗೆ ಸಿಲುಕಿರುವರೇ....., ಎಂದು ಬೇರೊಬ್ಬರು ತೆರಳಬೇಕಾದ ಜಾಗದಲ್ಲಿ ಸ್ವತಃ ತಾವೆ ಮಿಲಿಟರಿ ಪಾರಂಪರೆಯನ್ನು ಎತ್ತಿ ಹಿಡಿಯಲು ಹೋಗಿ, ಭಾರಿ ಪ್ರಮಾಣದ ಹಿಮಪಾತಕ್ಕೆ ಸಿಲುಕಿ, ಸುಮಾರು 15 ಕಿ. ಮೀ. ಕೊಚ್ಚಿ ಹೋಗಿ, ದೇಶದ ಒಳಿತಿಗೆ ಪ್ರಾಣತ್ಯಾಗ ಮಾಡಿದ ಕುಯ್ಯಮುಡಿ ಬೆಲ್ಲು ಬೆಳ್ಳಪ್ಪ ನಿಜಕ್ಕೂ, ಜನ-ಜನಾರ್ಧನರ ಮೆಚ್ಚುಗೆ ವೀರ ಯೋಧ.

ಇವರ ವೀರ ಮರಣ, ತಂದೆ ಪೊನ್ನಪ್ಪ ತಾಯಿ ಚಂದ್ರಮ್ಮ ಪತ್ನಿ ಕವಿತಾ, ಪುತ್ರರಾದ ಭುವನ್, ಪವನ್, ಇಬ್ಬರು ಸಹೋದರ ಮೂವರು ಸಹೋದರಿಯರಿಗೆ ಅಪಾರ ದುಃಖವನ್ನು ಉಂಟು ಮಾಡಿದೆ. ಮಗ ಭುವನ್ ಪಪ್ಪನನ್ನು ಸುಟ್ಟು ಹಾಕಿ ಸ್ಟಾರ್ ಹತ್ರ ಕಳಿಸಿಬಿಟ್ಟರು." ಎಂಬ ಮಾತೂ, 4 ವರ್ಷದ ಪವನ್ "ನಾನು ABCD.....ಬರೆಯುತ್ತಿಲ್ಲಾದ್ದರಿಂದ ಸಿಟ್ಟು ಮಾಡಿಕೊಂಡು ಮಲಗಿ ಬಿಟ್ಟಿದ್ದಾರೆ" ಎನ್ನುವ ಮಾತು ಕೇಳಲು ಕರುಳು ಮಿಡಿಯುವಂತಾಗಿದೆ.

ದಿ। ಬೆಲ್ಲುಬೆಳ್ಳಪ್ಪನವರು 1959 ರಲ್ಲಿ ಜನಿಸಿ, ತಮ್ಮ 10 ನೇ ತರಗತಿ ವಿದ್ಯಾಭ್ಯಾಸವನ್ನು ಪಿರಿಯಾಪಟ್ಟಣದಲ್ಲಿ ಮುಗಿಸಿ, ತಮ್ಮ ಬಿ. ಎಸ್.ಸಿ. ಪದವಿಯನ್ನು ಮೈಸೂರಿನಲ್ಲಿ 72% ಮೆರಿಟ್‌ನಲ್ಲಿ ಮುಗಿಸಿದ ಪ್ರತಿಭಾವಂತರು. 1980 ರಲ್ಲಿ ಸೇನೆಗೆ ಸೇರಿದ ಇವರು ತುಂಬಾ ಪ್ರಾಮಾಣಿಕ, ಕರ್ತವ್ಯ ನಿಷ್ಠೆಯುಳ್ಳ ದಕ್ಷ ಅಧಿಕಾರಿಯಾಗಿದ್ದರೆ, ಇವರು ತಮ್ಮ 43 ನೆ ವಯಸ್ಸಿನಲ್ಲಿಯೆ ಪ್ರಾಣತ್ಯಾಗ ಮಾಡಿದ ವೀರ ಯೋಧ.

ದಿವಂಗತರು ಆಗಿನ ಕಾಲದಲ್ಲಿ B.Sc.,ಪದವಿಯಲ್ಲಿ 72% ಅಂಕಗಳಿಸಿದ್ದು, ಮೆಡಿಕಲ್ ಸೀಟು ಲಭಿಸಿದ್ದು, ಅದಕ್ಕಿಂತ ಮೊದಲೆ ದೇಶ ಸೇವೆಗೈಯಲು ಮಿಲಿಟರಿ ಸರ್ವೀಸಿಗೆ ಸೇರ್ಪಡೆಗೊಂಡದ್ದರಿಂದ ವಾಪಾಸು ಬರುವುದಕ್ಕೆ ಅವಕಾಶವಿಲ್ಲದೆ ಅಲ್ಲಿಯೇ ಉಳಿದು, ವಂಚಿತರಾದ ಅದೃಷ್ಟ ಹೀನರು.

ಇವರ ಪತ್ನಿ ಕವಿತ ಕಡಿಯತ್ತೂರು ಗ್ರಾಮದ ಪೊರೆಯನ ದಿ। ಪಳಂಗಪ್ಪ ಹಾಗೂ ಬೋಜಮ್ಮನವರ ಪುತ್ರಿ. ಇವರು 4 ಸಹೋದರಿಯರು ಹಾಗು ಒಬ್ಬ ಸಹೋದರನನ್ನು ಹೊಂದಿದ್ದಾರೆ. ಬೆಲ್ಲುನವರ ಪುತ್ರ 6 ವರ್ಷದ ಭುವನ್ U.K.G.ಯಲ್ಲಿಯೂ 4 ವರ್ಷದ ಪವನ್ L.K.G. ಯಲ್ಲಿಯೂ ಬೆಂಗಳೂರಿನಲ್ಲಿ ಓದುತ್ತಿರುವ ಮುಗ್ಧ ಬಾಲಕರು.

ದಿ|| ಬೆಳ್ಳಪ್ಪ ಸಾವಿಗೀಡಾದ ದಿನದಂದೆ ಕುಟುಂಬಕ್ಕೆ ದೂರವಾಣಿ ಮೂಲಕ ಮಾಹಿತಿ ಬಂದಿತ್ತು. ಮೃತರನ್ನು ತಾ|| 6 ರಂದು ಬೆಂಗಳೂರಿಗೆ ತಂದಾಗ, ಪ್ರಾರ್ಥೀವ ಶರೀರವನ್ನು ಮೃತರ ಬಂಧು ಬಳಗ ಹಾಗೂ ಗೌಡ ಸಮಾಜದಿಂದ ಬರಮಾಡಿಕೊಳ್ಳಲಾಯಿತು. ಬಳಿಕ ತಾ|| 7 ರಂದು ಮುಂಜಾನೆ 3-45 ಕ್ಕೆ ಪ್ರಾರ್ಥಿವ ಶರೀರವನ್ನು ಬೆಂಗಳೂರಿನಿಂದ ಸ್ವಗ್ರಾಮವಾದ ಪಿರಿಯಾಪಟ್ಟಣದ ಲಿಂಗಾಪುರಕ್ಕೆ ಮಿಲಿಟರಿ ವಾಹನದಲ್ಲಿ ತರುವಾಗ ಮೈಸೂರಿನ D.R.L.ಪಡೆ ಕುಶಲ ತೋಪು ಹಾರಿಸಿ ಗೌರವ ಸೂಚಿಸಿ ಕಳುಹಿಸಿಕೊಟ್ಟರು.

ಪ್ರಾರ್ಥೀವ ಶರೀರದೊಂದಿಗೆ ಕ್ಯಾಪ್ಟನ್ ನೋಯಲ್ ಎ. ಎ. ಗ್ರಾಂಟ್ ಆಗಮಿಸಿ ಸೇನಾ ವಿಧಿ ವಿಧಾನ ಮುಗಿಸಿ ಶರೀರವನ್ನು ವಾರಸುದಾರರಿಗೆ ಒಪ್ಪಿಸಿದರು. ಬೆಳಿಗ್ಗೆ 11 ಗಂಟೆಯವರೆಗೆ ಸಾರ್ವಜನಿಕ ದರ್ಶನಕ್ಕೆ ಅನುವು ಮಾಡಿಕೊಟ್ಟು, ತದನಂತರ ಗೌಡ ಪದ್ಧತಿ ಪ್ರಕಾರ ಮನೆ ಸಮೀಪದ ತೋಟದಲ್ಲಿ ಪುತ್ರ ಭುವನ್ ಚಿತೆಗೆ ಅಗ್ನಿ ಸ್ಪರ್ಶ ಮಾಡುವುದರೊಂದಿಗೆ ದಿ। ಬೆಲ್ಲು ಬೆಳ್ಳಪ್ಪನವರು ಪಂಚಭೂತಗಳಲ್ಲಿ ಲೀನರಾದರು.

ಮೃತರಿಗೆ ಗೌರವ ಸೂಚಿಸಲು ಹುಣಸೂರು ಉಪ ವಿಭಾಗದ ಉಪ ವಿಭಾಗಾಧಿಕಾರಿ ಸೋಮಶೇಖರ್, M.L.A ಬಸವರಾಜು, ಪಿರಿಯಾಪಟ್ಟಣ ಸಬ್ ಇನ್ಸ್‌ಪೆಕ್ಟರ್ ಶೇಷಾದ್ರಿ, ರೋಟರಿ ಅಧ್ಯಕ್ಷ ಕೆ. ಎಂ. ವಿನಯಶೇಖರ್, ವಕೀಲ ಬಿ. ಜವರೇಗೌಡ, ಸರ್ಕಲ್ ಇನ್ಸ್‌ಪೆಕ್ಟರ್ ಎಂ. ಎಂ. ಮಹದೇವಯ್ಯ, ಸೈನಿಕ ಕಲ್ಯಾಣ ಪುನರ್ವಸತಿ ಇಲಾಖೆ ಉಪ ನಿರ್ದೇಶಕ ಡಾ|| ಪ್ರಕಾಶ್, ಬೆಟ್ಟದ ಪುರದ ವಿರಕ್ತ ಮಠಾಧೀಶರಾದ ಚನ್ನಬಸವದೇಶಿ ಕೇಂದ್ರ ಮಹಾ ಸ್ವಾಮೀಜಿ ಯವರು, ಪಟ್ಟಣ ಪಂಚಾಯತ್ ಅಧ್ಯಕ್ಷೆ ಸುಮತಿ ನಾಗಪ್ಪ, ಮಾಜಿ ಅಧ್ಯಕ್ಷ ಕೆ. ಮಹದೇವ್, ಉಪಾಧ್ಯಕ್ಷ ವೆಂಕಟಯ್ಯ, ತಂಬಾಕು ಮಂಡಳಿ ಮಾಜಿ ಉಪಾಧ್ಯಕ್ಷ ಚೌಡಯ್ಯನವರು ಆಗಮಿಸಿ ಅಂತಿಮ ನಮನ ಸಲ್ಲಿಸಿದರು.

ಅಲ್ಲದೆ ಗೌಡ ಜನಾಂಗದ ಪರವಾಗಿ ಬೆಂಗಳೂರಿನಿಂದ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಅಧ್ಯಕ್ಷ ದಂಬೆಕೋಡಿ ಆನಂದ್‌ರವರೂ, ಗೌರವ ಕಾರ್ಯದರ್ಶಿ ನಂಗಾರು ನಿಂಗರಾಜುರವರೂ, ಡಿ. ವೈ. ಎಸ್. ಪಿ. ಸಿರಗಜೆ ಮಂದಪ್ಪನವರೂ, ಮಾಜಿ ಎಂ. ಎಲ್. ಎ. ದಂಬೆಕೋಡಿ ಮಾದಪ್ಪನವರು, ಬೆಂಗಳೂರಿನ ಕೆಂಪೇಗೌಡ ರೂರಲ್ ಹೌಸಿಂಗ್ ಕೋಪರೇಟಿವ್ ಸೊಸೈಟಿಯ ಅಧ್ಯಕ್ಷರಾದ ನಂಗಾರು ನಾಣಯ್ಯನವರು, ಕುಶಾಲನಗರದ ಗೌಡ ಸಮಾಜದ ಅಧ್ಯಕ್ಷರೂ, ಕೊಡಗು ಗೌಡ ಸಮಾಜ ಮಡಿಕೇರಿಯ ಉಪಾಧ್ಯಕ್ಷರೂ, ದಕ್ಷಿಣ ಕನ್ನಡ ಮತ್ತು ಕೊಡಗು ಅಭಿವೃದ್ಧಿ ಸಂಘದ ಅಧ್ಯಕ್ಷರಾದ ಶ್ರೀ ಕೋರನ ಪೂಣಚ್ಚನವರು ಹಾಗು ಹಿತೈಷಿಗಳು ಮತ್ತು ಅಪಾರ ಬಂಧು-ಬಾಂಧವರು ಆಗಮಿಸಿ ತಮ್ಮ ಅಂತಿಮ ಗೌರವ ಸೂಚಿಸಿದರು.

ವರದಿ : **ಸಂಗಾತಿ**



ಪಾರ್ಥಿವ ಶರೀರವನ್ನು ವಾರಸುದಾರರಿಗೆ ಒಪ್ಪಿಸಿ
ಸೆಲ್ಯೂಟ್ ಹೊಡಿತಿರುವ ಕ್ಯಾಪ್ಟನ್ ನೋಯಲ್



ಪೊಲೀಸರಿಂದ ಗೌರವ ಸೂಚನೆ



ಶವಪೆಟ್ಟಿಗೆಯೆದುರು, ಮಕ್ಕಳಾದ ಪವನ್, ಭುವನ್
ತನ್ನ ಚಿಕ್ಕಪ್ಪ ಅಶ್ವಥ್‌ರೊಂದಿಗೆ.



ಚಟ್ಟದ ಪುರದ ವಿರಕ್ತ ಮಠಾಧೀಶರಾದ ಚೆನ್ನಬಸವ ದೇಶಿ ಕೇಂದ್ರ ಮಹಾಸ್ವಾಮೀಜಿ



ಪಂಚಭೂತಗಳಲ್ಲಿ ಲೀನವಾಗಲು ಹೊರಟ ಚೆಲ್ಲೂರವರ ಪಾರ್ಥಿವ ಶರೀರ



ದುಃಖದ ಮಡುವಿನಲ್ಲಿ ಪತ್ನಿ ಕವಿತಾ



ದಿವಂಗತ ಚೆಲ್ಲು ಬೆಳ್ಳಪ್ಪ

ಆಪತ್ತಿಗಾದವನೆ ನೆಂಟ

# ಕೊಡಗು ಗೌಡರ ಘನತೆ ಎತ್ತಿದ ಬಲಿಷ್ಠ ನಾಯಕ :

***ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಗೆ ಸತತ 6 ನೇ ಬಾರಿಗೆ ಅಧ್ಯಕ್ಷರಾಗಿ ಆಯ್ಕೆಯಾದ ತುಂತಜೆ ಗಣೇಶ್.***



ಕೊಡಗಿನಲ್ಲಿ ಗೌಡ ಜನಾಂಗ ಹಲವು ಶತಮಾನಗಳಿಂದ ತನ್ನದೇ ಸಂಸ್ಕೃತಿ ಸಂಪ್ರದಾಯಗಳನ್ನು ಆಚರಿಸಿಕೊಂಡು ಬಾಳಿ ಬದುಕಿರಬಹುದು. ಆದರೆ ಹೊರ ಜಗತ್ತಿಗೆ ಗೌಡ ಜನಾಂಗವೊಂದು ಕೊಡಗಿನಲ್ಲಿದೆಯೆಂಬುದರ ಅರಿವಿರಲಿಲ್ಲ. ಬಹಳ ಹಿಂದೆಯೇ ಗೌಡ ಜನಾಂಗ ಹಲವು ಸಂಘಟನೆಗಳನ್ನು ಕಟ್ಟಿಕೊಂಡಿರಬಹುದು. ಆದರೆ ತನ್ನ ವಿಶಿಷ್ಟ ಸಂಸ್ಕೃತಿಯನ್ನು ಜಗತ್ತಿನೆದುರು ತೆರೆದಿಡಲು ಯಶಸ್ವಿಯಾಗಿರಲಿಲ್ಲ. 1997 ರವರೆಗೂ ಗೌಡ ಜನಾಂಗ ನಿರ್ಜೀವ ಸ್ಥಿತಿಯಲ್ಲೆ ಮುಳುಗಿತ್ತು. ಆದರೆ ಆ ಹೊತ್ತಿಗೆ ಇದ್ದಕ್ಕಿದ್ದಂತೆ ಜಾಗೃತಿ ಮೊಳಗಿತು. ಅದೇ ವರ್ಷ ಮೊದಲಿಗೆ 'ಕೊಡಗು-ಸಂಗಾತಿ' ಪತ್ರಿಕೆ ಉದಯಿಸಿತು. ನಂತರ ಗೌಡ ಮಹಿಳಾ ಒಕ್ಕೂಟಗಳು ಅಸ್ತಿತ್ವಕ್ಕೆ ಬಂದವು. ಹಲವು ಗೌಡ ಯುವ ಸಂಘಟನೆಗಳು ಬೆಳಕಿಗೆ ಬಂದವು. ತದನಂತರ ಆ ಹೊತ್ತಿನಲ್ಲೇ 'ಗೌಡ ಸಂಸ್ಕೃತಿಯನ್ನು' ಮೊಳಗಿಸುವ ಶಕ್ತಿಯುತ ಸಂಘಟನೆ 'ಗೌಡ ಸಾಂಸ್ಕೃತಿಕ ಅಕಾಡೆಮಿ' ಕೊಡಗಿನಲ್ಲಿ ಸ್ಥಾಪನೆಯಾಯಿತು. ಕೊಡಗು ಗೌಡರಲ್ಲಿ ಅದುವರೆಗೆ ಇರದಿದ್ದ ಮಿಂಚಿನ ಸಂಚಾರವಾಯಿತು. ಅಲ್ಲಿಯತನಕ ಅದುಮಿಟ್ಟ ಸಂಸ್ಕೃತಿ, ಸಂಪ್ರದಾಯಗಳು ಜ್ವಾಲಾಮುಖಿಯಂತೆ ಮೇಳೈಸಲಾರಂಭಿಸಿದವು. ಜನರಲ್ಲಿದ್ದ ಕೀಳರಿಮೆ ದೂರವಾಗಿ 'ನಮ್ಮತನ' ಮೂಡಲಾರಂಭಿಸಿದವು. ಅಲ್ಪ ಅವಧಿಯಲ್ಲೇ ಕೊಡಗಿನಲ್ಲೂ ಬಲಿಷ್ಠ ಗೌಡ ಜನಾಂಗವೊಂದಿದೆ ಎಂಬುದು ಜಗಜ್ಜಾಹೀರಾಯಿತು. ಈ ರೀತಿ ಗೌಡ ಜನಾಂಗದಲ್ಲಿ ಕ್ರಾಂತಿಯ ಕಿಡಿ ಮೂಡಿಸಿದ ನಾಯಕ, ಗೌಡ ಸಾಂಸ್ಕೃತಿಕ ಹಡಗಿನ ನಾವಿಕನೆ ತುಂತಜೆ ಗಣೇಶ್ ವೆಂಕಟೇಶ್. ಅಕಾಡೆಮಿ ಸ್ಥಾಪನೆಯಾದಂದಿನಿಂದ ಇಂದಿನವರೆಗೂ ಅದಕ್ಕೆ ಶ್ರೇಷ್ಠ ನಾಯಕತ್ವವನ್ನು ಒದಗಿಸಿದ ಅವರನ್ನೂ 'ಕೊಡಗು ಸಂಗಾತಿ' ಮಾತನಾಡಿಸಿದಾಗ :

***ಕೊಡಗು ಸಂಗಾತಿ : ತಾವು ಸಾರ್ವಜನಿಕ ಸೇವೆಗೆ ಪಾದಾರ್ಪಣೆಗೈಯ್ಯಲು ಪ್ರೇರಣೆ ಏನು?***

***ಉತ್ತರ :*** ನನ್ನ ಅಜ್ಜ ತುಂತಜೆ ಮಂದಣ್ಣನವರು, ಜನಾಂಗ ಸೇವೆ, ಊರಿನವರಿಗೆ ಸಹಾಯ ಮಾಡುವುದು, ನೆಂಟರಿಗೆ ಸಹಾಯ ಮಾಡುವುದು ಮಾಡುತ್ತಿದ್ದರು. ಅವರ ಮೇಲ್ಪಂಕ್ತಿ ನನಗೆ ಮಾರ್ಗದರ್ಶನವಾಯಿತು. ಅಲ್ಲದೆ ನಾನು ಹಲವಾರು ಯುವಕರೊಡನೆ ಬೆರೆಯುತ್ತಿದ್ದುದು, ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದುದು, ನನ್ನಲ್ಲಿ ನಾಯಕತ್ವಮೂಡಲು ಕಾರಣವಾಯಿತು. ಮುಂದೆ 1977 ರಲ್ಲಿ ದಂಬೆಕೋಡಿ ಮಾದಪ್ಪನವರು ಚುನಾವಣೆಯಲ್ಲಿ ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿದಾಗ ಅವರ ಪರವಾಗಿ ಕೆಲಸ ಮಾಡಲು ನನ್ನ ಅಜ್ಜ ಪ್ರೋತ್ಸಾಹಿಸಿದರು. ಮುಂದೆ ಅವರ ಅಭಿಮಾನಿಯಾಗಿ ರಾಜಕೀಯದಲ್ಲಿ ಪಾಲ್ಗೊಳ್ಳುತ್ತಾ ಬಂದಿದ್ದೇನೆ.

***ಕೊ. ಸಂ. : ರಾಜಕೀಯದಲ್ಲಿ ನಿಮ್ಮ ಪಾತ್ರವೇನು?***

***ಉ :*** ದಂಬೆಕೋಡಿ ಸುಬ್ರಮಣಿಯವರ ಪ್ರೋತ್ಸಾಹದಿಂದ ಹಾಕತ್ತೂರು ಸೇವಾ ಸಹಕಾರ ಬ್ಯಾಂಕ್ ನಿರ್ದೇಶಕ ಸ್ಥಾನಕ್ಕೆ ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿ 1982 ರಲ್ಲಿ ಮೊದಲ ಚುನಾವಣೆಯಲ್ಲೆ ಗೆಲುವು ಸಾಧಿಸಿದೆ. 1986 ರಲ್ಲಿ ಹಾಕತ್ತೂರು ಮಂಡಲ ಪಂಚಾಯಿತಿಗೆ ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಜಯ ಸಾಧಿಸಿದೆ. ಮತ್ತೆ 2 ನೇ ಬಾರಿಗೆ ಬಿ. ಜೆ.ಪಿ. ವತಿಯಿಂದ ನಿಂತು ಗೆದ್ದು ಬಂದೆ. 'ತಾಲೂಕು ಮಾರ್ಕೆಟಿಂಗ್ ಸೊಸೈಟಿ' ಮುರ್ನಾಡು ಇದಕ್ಕೆ 2 ಬಾರಿ ನಿರ್ದೇಶಕರಾಗಿ ಆಯ್ಕೆಯಾದುದಲ್ಲದೆ 5 ವರ್ಷಗಳ ಕಾಲ ಉಪಾಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದೇನೆ. 1981-92 ರವರೆಗೆ ಹಾಕತ್ತೂರು ಗೌರಿ ಗಣೇಶ ಸಮಿತಿ ಅಧ್ಯಕ್ಷರಾಗಿ, ಹಿಂದೂ ಸಂಘಟನೆಯಲ್ಲಿ ತೊಡಗಿದೆ. 1993-97 ರವರೆಗೆ ಬಿಳಿಗೇರಿ ಭಗವತಿ ದೇವಾಲಯ ಸಮಿತಿಯ ಅಧ್ಯಕ್ಷರಾಗಿ ದೇವಾಲಯವನ್ನು ಅಭಿವೃದ್ಧಿಪಡಿಸಿದ್ದೇನೆ. ಅಲ್ಲದೆ 1987 ರಿಂದ ಈಗಲೂ ಸಹ ನನ್ನ ಕುಟುಂಬದ ಅಧ್ಯಕ್ಷನಾಗಿ, ವರ್ಷಕೊಮ್ಮೆ ಕುಟುಂಬದ ಸಭೆ ನಡೆಸಿ, ಕುಟುಂಬದ ಸದಸ್ಯರ ನಡುವೆ ಸಾಮರಸ್ಯ, ಒಗ್ಗಟ್ಟು, ಸಹಕಾರವನ್ನು ಶಾಶ್ವತವಾಗಿ ಕಾಯ್ದುಕೊಂಡು ಬರುತ್ತಿದ್ದೇನೆ. ಈಗ 1997 ರಿಂದ ಮಡಿಕೇರಿಯ ಎ. ಪಿ. ಎಂ. ಸಿ. ಯ ಹಾಲಿ ಸದಸ್ಯನಾಗಿ ಕಾರ್ಯನಿರ್ವಹಿಸುತ್ತಿದ್ದೇನೆ.

***ಕೊ. ಸಂ. : ಕೊಡಗು ಗೌಡ ಅಕಾಡೆಮಿಯ ಅಧ್ಯಕ್ಷರಾಗಿ ನೀವು ಹೇಗೆ ಆಯ್ಕೆಯಾದಿರಿ?***

***ಉ :*** ಅದೊಂದು ಆಕಸ್ಮಿಕ, ಅಂದು ವಿದ್ಯಾಸಂಘದ ಅಧ್ಯಕ್ಷರಾಗಿದ್ದ ಪೂರ್ಣಯ್ಯನವರ ಅಧ್ಯಕ್ಷತೆಯಲ್ಲಿ ಕಾರ್ಯದರ್ಶಿ ಕೋಳುಮುಡಿಯನ ಅನಂತಕುಮಾರ್‌ನವರು ವಿದ್ಯಾಸಂಘದ ಕಟ್ಟಡದಲ್ಲಿ ಸಭೆಯೊಂದನ್ನು ಕರೆಯಲಾಗಿತ್ತು. ಆಹ್ವಾನದ ಮೇರೆಗೆ ನಾನಲ್ಲಿಗೆ ಹೋಗಿ ಹಿಂದಿನ ಸಾಲಿನಲ್ಲಿ ಕುಳಿತಿದ್ದೆ. ಅದೇ ದಿನ ಅಕಾಡೆಮಿಯ ಉದಯವಾಯಿತು. ಆ ಸಭೆಯಲ್ಲಿ ಭಾಗವಹಿಸಿದ್ದ ಹಿರಿಯರು ನನ್ನ ಮೇಲೆ ನಂಬಿಕೆಯಿಟ್ಟು, ಅದರ ಜವಾಬ್ದಾರಿಯನ್ನು ನನ್ನ

ಹೆಗಲಿಗೇರಿಸಿದರು.

***ಕೊ. ಸಂ. : ಆ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದ ತೃಪ್ತಿ ನಿಮಗಿದೆಯೇ?***

***ಉ :*** ಖಂಡಿತವಾಗಿಯೂ ನಾನು ಹಾಗೂ ನಮ್ಮ ಅಕಾಡೆಮಿ ಬಳಗ, ಗೌಡ ಸಂಸ್ಕೃತಿಯನ್ನು ಬೆಳಗಿಸುವ ಪ್ರಯತ್ನ ಮಾಡಿದ್ದೇವೆ. ನಮ್ಮ ಸಾಂಸ್ಕೃತಿಕ ಹಬ್ಬಗಳಾದ ಹುತ್ತರಿ, ಕೈಲ್‌ಮುಹೂರ್ತಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಬರಲಾಗುತ್ತಿದೆ. ಆದರ್ಶ ದಂಪತಿ ಕಾರ್ಯಕ್ರಮ, ಮಕ್ಕಳಿಗೆ ಭಾಷಣ ಸ್ಪರ್ಧೆ, ಪ್ರಬಂಧ ಸ್ಪರ್ಧೆಗಳಲ್ಲದೆ ಸಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದೇವೆ. ದಸರಾ ಮೊದಲಾದ ಸಾರ್ವಜನಿಕ ವೇದಿಕೆಗಳಲ್ಲಿ ನಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸಿದ್ದೇವೆ. ಕ್ರೀಡೆಯನ್ನು ಪ್ರೋತ್ಸಾಹಿಸುವುದಕ್ಕಾಗಿ ಮತ್ತು ಸಂಘಟನೆಯ ಉದ್ದೇಶದಿಂದ ಕುಟುಂಬವಾರು ಹಗ್ಗ ಜಗ್ಗಾಟ ಸ್ಪರ್ಧೆಯನ್ನು ಏರ್ಪಡಿಸಿದ್ದೇನೆ. ಕುಟುಂಬವಾರು ವಾಲಿಬಾಲ್ ಪಂದ್ಯಾವಳಿಯನ್ನು ಏರ್ಪಡಿಸಿದ್ದೆವು. ದೇರಜೆ ಗದ್ದೆಯಲ್ಲಿ ಕಳೆದೆರಡು ವರ್ಷಗಳಿಂದ ಕೆಸರು ಗದ್ದೆ ಕ್ರೀಡಾಕೂಟವನ್ನು ಏರ್ಪಡಿಸುತ್ತಾ ಬರುತ್ತಿದ್ದೇವೆ. ಕೆದಂಬಾಡಿ ಕುಟುಂಬಸ್ಥರೊಡಗೂಡಿ ಗ್ರಾಮವಾರು ಕ್ರಿಕೆಟ್ ಪಂದ್ಯಾವಳಿ ಯನ್ನೇರ್ಪಡಿಸಿದ್ದೆವು. ಮೂರ್ನಾಡು ಗೌಡ ಯುವ ಸಂಘದವರೊಡಗೂಡಿ ಕುಟುಂಬವಾರು ಕ್ರಿಕೆಟ್ ಪಂದ್ಯವನ್ನೇರ್ಪಡಿಸಿದೆವು. ಈ ವರ್ಷ 'ಪರ್ಲಕೋಟಿ ಕಪ್' ಪಂದ್ಯಾವಳಿಯನ್ನೇರ್ಪಡಿಸಿ ಯಶಸ್ವಿಯಾಗಿದ್ದು ಮುಂದಿನ ಹಲವು ವರ್ಷಗಳಿಗೆ ಈಗಾಗಲೇ ಪ್ರಾಯೋಜಕರು ಮುಂದೆ ಬಂದಿದ್ದಾರೆ. ಅಲ್ಲದೆ ಅಕಾಡೆಮಿ ಹಲವು ಸಂತ್ರಸ್ಥರಿಗೂ ನೆರವು ನೀಡುತ್ತಾ ಬರುತ್ತಿದೆ.

***ಕೊ. ಸಂ. : ಅಕಾಡೆಮಿಯಿಂದ ಕೆಲವರು ಹೊರ ಹೋಗಿದ್ದಾರೆ. ಅಲ್ಲದೆ ಅಕಾಡೆಮಿಯಲ್ಲಿ ಸಾಹಿತಿಗಳಾರೂ ಇಲ್ಲ. ಅದು ರಾಜಕೀಯ ಗುಂಪೆಂಬ ಟೀಕೆಯಿದೆಯಲ್ಲ?***

***ಉ :*** ಟೀಕೆಗಳಿದ್ದರೇನೇ ನಾವು ಎಚ್ಚರಿಕೆಯಿಂದ ಕೆಲಸ ಮಾಡಲು ಸಾಧ್ಯ. 'ನಿಂದಕರಿರಬೇಕಯ್ಯ ಜಗದಲ್ಲಿ' ಎನ್ನುವ ದಾಸವಾಣಿಯಂತೆ, ನಮ್ಮನ್ನು ಟೀಕಿಸುವವರಿದ್ದಾಗ ನಾವು ಹೆಚ್ಚು ಹೆಚ್ಚು ಯಶಸ್ಸನ್ನು ಗಳಿಸಲು ಸಾಧ್ಯ. ನಾವು ಜನರಿಂದಲೆ ಹಣ ಸಂಗ್ರಹಿಸಿ ಕಾರ್ಯಕ್ರಮವನ್ನು ನೀಡಬೇಕಾಗಿದೆ. ಇತರ ಸಂಘಟನೆಗಳಂತೆ ನಮಗೆ ಸ್ವಂತ ಹಣದ ಮೂಲವಿಲ್ಲ. ಅಲ್ಲದೆ ಅಕಾಡೆಮಿ ಜನಾಂಗವನ್ನು ಸರ್ವ ರೀತಿಯಲ್ಲೂ ಅಭಿವೃದ್ಧಿಯತ್ತ ಕೊಂಡೊಯ್ಯಲು ಪ್ರಯತ್ನಿಸುತ್ತಿದೆ. ಸಂಸ್ಕೃತಿ ರಕ್ಷಣೆಗಾಗಿ ಸಾಹಿತಿಗಳೂ ಸೇರಿದಂತೆ ಜನಾಂಗದ ಗಣ್ಯರನ್ನು, ಅನುಭವಿಗಳನ್ನೂ ಸಭೆ ಕರೆದು ಚರ್ಚಾಗೋಷ್ಠಿಗಳನ್ನು ಕರೆದು, ಅದರ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುತ್ತಿದ್ದೇವೆ.

***ಕೊ.ಸಂ. : ಮತ್ತೆ ನೀವು ಅಕಾಡೆಮಿಯ ಅಧ್ಯಕ್ಷರಾಗಿದ್ದೀರಾ, ಅಧ್ಯಕ್ಷರಾಗಿ ನಿಮ್ಮ ಮುಂದಿನ ಗುರಿಯೇನು?***

***ಉ :*** ಈಗಾಗಲೇ ಹಲವು ಹಿರಿಯರು, ನಿರ್ದೇಶಕರು, ಅಭಿಮಾನಿಗಳು, ನನ್ನನ್ನು ಅಧ್ಯಕ್ಷರಾಗಿ ಮುಂದುವರಿಯಬೇಕೆಂದು ಅಪೇಕ್ಷಿಸಿ ಅಧ್ಯಕ್ಷ ಸ್ಥಾನಕ್ಕೆ ಆಯ್ಕೆ ಮಾಡಿದ್ದಾರೆ. ನಾನು ಸಂಸ್ಕೃತಿಯ ರಕ್ಷಣೆಯೊಡನೆ, ಯುವಕ, ಯುವತಿಯರಿಗೆ, ನಾಯಕತ್ವವನ್ನು ಮೈಗೂಡಿಸುವ ಬೇಸಿಗೆ ಶಿಬಿರಗಳನ್ನೇರ್ಪಡಿಸುವ ಇರಾದೆಯಿದೆ. ಅಲ್ಲದೆ ಅರೆಗನ್ನಡ ಭಾಷೆಯ ಧ್ವನಿ ಸುರುಳಿಗಳನ್ನು ಹೊರ ತರುವ ಗುರಿಯನ್ನು ಇಟ್ಟುಕೊಂಡಿದ್ದೇನೆ.

***ಕೊ.ಸಂ.:'ಗೌಡ' ಜನಾಂಗಕ್ಕೆ ಮೀಸಲಾತಿಯ ಅಗತ್ಯವಿಲ್ಲವೆ?***

***ಉ :*** ಖಂಡಿತವಾಗಿಯೂ ಅಗತ್ಯವಿದೆ. ನಮ್ಮ ಜನಾಂಗವನ್ನು IIAಗೆ ಸೇರಿಸಬೇಕೆಂದು ನಾವು ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ನೇಮಕಗೊಂಡಿದ್ದು ಆಯೋಗಗಳ ಮುಂದೆ ಮನವಿ ಮಾಡಿದ್ದೇವೆ. ಮಾವಾಜಿ ಬಾಲಕೃಷ್ಣರವರು ಈ ಬಗ್ಗೆ ಹೆಚ್ಚು ಆಸಕ್ತಿ ತೆಗೆದುಕೊಂಡಿದ್ದಾರೆ. ನುರಿತ ವಕೀಲರನ್ನೊಳಗೊಂಡಂತೆ ಮಾಜಿ ಸರಕಾರಿ ನೌಕರರನ್ನೊಳಗೊಂಡ ಸಮಿತಿಯನ್ನು ರಚನೆ ಮಾಡಿಕೊಂಡು ಈ ಬಗ್ಗೆ ಸರಕಾರದ ಗಮನ ಸೆಳೆಯುವುದು ಒಳ್ಳೆಯದು.

ಒಂದು ಕಾಲದಲ್ಲಿ ತಲೆಗೆ ಶಿರಸ್ತ್ರಾಣ ಧರಿಸಿ ಕೈಯಲ್ಲಿ ಕತ್ತಿ ಹಿಡಿದು ಹಿಂದೂ ಧರ್ಮ ರಕ್ಷಣೆಗೆ ಮುಂದಾಗಿದ್ದ ತುಂತಜೆ ಗಣೇಶರವರು ಈಗ ಗೌಡ ಸಂಸ್ಕೃತಿಯ ರಕ್ಷಣೆಗೆ ಮುಂದಾದರು. ನಿರ್ಜೀವ ಸ್ಥಿತಿಯಲ್ಲಿದ್ದ ಗೌಡ ಸಂಸ್ಕೃತಿಗೀಗ ಮರುಜೀವ ತುಂಬಿದರು. ಕೊಡಗಿನ ಗೌಡ ಸಂಸ್ಕೃತಿಯ ರಕ್ಷಣೆಯ ವಿಷಯದಲ್ಲಿ ಅವರು ಯಾರೊಂದಿಗೂ ರಾಜಿ ಮಾಡಿಕೊಳ್ಳದ ಶಿಸ್ತಿನ ಸಿಪಾಯಿ, ಬಾಲ್ಯದಲ್ಲೇ ತನ್ನ ತಾಯಿಯನ್ನು ನಂತರ ತಂದೆ ರಾಮಪ್ಪನವರನ್ನು ಕಳೆದುಕೊಂಡ ಗಣೇಶರವರು ತನ್ನ 7 ಜನ ಸೋದರ, ಸೋದರಿಯರೊಡನೆ, ಚಿಕ್ಕಮ್ಮನ ಮಡಿಲಿನಲ್ಲಿ, ಅಜ್ಜನ ಆಶ್ರಯದಲ್ಲಿ ಬೆಳೆದವರು. ಹಲವು ಕಷ್ಟಗಳನ್ನೆದುರಿಸಿದರು. ತನ್ನ ಪ್ರತಿಭೆ ಮತ್ತು ಸಾಮರ್ಥ್ಯಗಳಿಂದಲೇ ಯಶಸ್ಸಿನ ಮೆಟ್ಟಿಲೇರಿ ಬಂದವರು ಇಂದು ತನ್ನ ಜನಾಂಗವನ್ನು ಮೆಟ್ಟಿಲೇರಿಸುತ್ತಾ ಸಾಗುತ್ತಿದ್ದಾರೆ.

ಕಡ್ಯದ ವೆಂಕಪ್ಪನವರ ಪುತ್ರಿ ನೈನಾನವರನ್ನು ವಿವಾಹವಾಗಿರುವ ಗಣೇಶ್‌ರವರಿಗೆ ಚಂದನ ಹಾಗೂ ಸುವಿನಾ ಎಂಬಿಬ್ಬರು ಮಕ್ಕಳ ಪುಟ್ಟ ಸಂಸಾರ. ಜೊತೆಗೆ ಅಕ್ಕನ ಮಗಳು ಸವಿತ ಸಹ ಇವರ ಮನೆ ಮಗಳಾಗಿ ಪದವಿ ವಿದ್ಯಾಭ್ಯಾಸ ಪಡೆಯುತ್ತಿದ್ದಾಳೆ. ತಂದೆಯಂತೆ ಮಕ್ಕಳೂ ಕೂಡ ಈಗಾಗಲೇ ಗೌಡಾಭಿಮಾನವನ್ನು ಮೈಗೂಡಿಸಿಕೊಂಡಿದ್ದಾರೆ. ಗಣೇಶರವರ ಯಶಸ್ಸು ಕುಟುಂಬದಿಂದಲೇ ಆರಂಭಗೊಳ್ಳುತ್ತದೆ. ಹಲವು ವರ್ಷಗಳಿಂದ ಅವರು ತುಂತಜೆ ಕುಟುಂಬದ ಅಧ್ಯಕ್ಷರಾಗಿ ಕುಟುಂಬವನ್ನು ಯಶಸ್ವಿಯಾಗಿ ಮುನ್ನಡೆಸಿದ್ದಾರೆ. ಕಳೆದ ಆರು ವರ್ಷಗಳಿಂದ ಅಕಾಡೆಮಿ ಅಧ್ಯಕ್ಷರಾಗಿ ಜನಾಂಗವನ್ನು ಮುನ್ನಡೆಸಿದ್ದಾರೆ. ಅವರಿನ್ನು ಸಂಸ್ಕೃತಿ ಸಂಪ್ರದಾಯಗಳಿಗೆ ಅದರಲ್ಲೂ ಉಡುಪುಗಳಿಗೆ ಹೆಚ್ಚು ಒತ್ತು ನೀಡಿ ಜನಾಂಗವನ್ನು ಮುಂದುವರಿಸಬೇಕು. ಮುನ್ನಡೆಯಬೇಕು. ನಮ್ಮ ಜನಾಂಗವೂ ಈ ಶಿಸ್ತಿನ ಸಿಪಾಯಿಯನ್ನು ಬೆಂಬಲಿಸಬೇಕೆಂಬುದು ಸಂಗಾತಿಯ ಆಶಯ.

ಬರಹ: ಪಟ್ಟಡ ಶಿವಕುಮಾರ್

---

ಚೋಟುದ್ದವಂಗೆ ಮಾರುದ್ದ ಚೇಷ್ಟೆ

---

# ದೇವಿಪ್ರಸಾದರ ಮನೆಯಲ್ಲಿ ನಿಧಿಯ ಕೊಪ್ಪರಿಗೆಯನ್ನು ಕಟ್ಟಿ ಹಾಕಿದ್ದಾರಂತೆ

ಅಲ್ಲೊಬ್ಬ ಜಂಗಮನಿದ್ದನಂತೆ, ಆತ ವಿಶಾಲವಾದ ಅಸಮ ಭೂಮಿಯನ್ನು ಕಡಿಸಿ ಕೃಷಿಯೋಗ್ಯ ಜಮೀನಾಗಿ ಪರಿವರ್ತಿಸಿದ. ಅವನ ಮಕ್ಕಳಂತಿದ್ದ ನಂಜಯ್ಯ ಮತ್ತು ಆತನ ಸಹೋದರ ಇವರಿಬ್ಬರಿಗೆ ಈ ಆಸ್ತಿ ಸಂದಿತು. ನಂಜಯ್ಯ ಇಲ್ಲೇ ತಳವೂರಿದರೆ, ನಂಜಯ್ಯನ ಸಹೋದರ ಬೆಳ್ಳಾರೆ ಸಮೀಪದ ಮಾಡಾವಿಗೆ ಹೋಗಿ ನೆಲೆಸಿದ.

***ಇದು ಕೌಟುಂಬಿಕ ಐತಿಹ್ಯ.***

ನಂಜಯ್ಯನ ಮಗ ಸಣ್ಣಯ್ಯ. ಸಣ್ಣಯ್ಯನ ಮಗ ಬಚ್ಚ ಗೌಡ, ಬಚ್ಚ ಗೌಡನ ಮಗ ಸಣ್ಣಯ್ಯ ಪಟೇಲರು, ಸಣ್ಣಯ್ಯ ಪಟೇಲರ ಮಗ ಶ್ರೀ ಎನ್. ಎಸ್. ದೇವಿಪ್ರಸಾದ್.

***ಇದು ಕುಟುಂಬದ ವಂಶಾವಳಿ.***

ಕುಟುಂಬದ ಮೂಲ ಪುರುಷರ ಮತ್ತಾರೂ ಅಲ್ಲ, ಆತ ಕಲ್ಯಾಣಪ್ಪನ ದಂಗೆಯ ನಾಯಕರಲ್ಲೊಬ್ಬನಾದ ಜಂಗಮ ಹುಲಿಕಡಿದ ನಂಜಯ್ಯ. ಹಾಗೆಂದೇ ಇಲ್ಲೊಂದು ವೀರಭದ್ರನ ನೆಲೆಯಿದೆ; ಮತ್ತು ಈ ವೀರಭದ್ರನಿಗೆ ವರ್ಷಂಪ್ರತಿ ಕೊಡಗಿನಿಂದ ಜಂಗಮನೊಬ್ಬನನ್ನು ಕರೆಸಿ ಆರಾಧನೆ ನಡೆಸುವ ಸಂಪ್ರದಾಯವಿದೆ.

ಇದೊಂದು ತೀರಾ ಇತ್ತೀಚಿನ ಊಹೆ. ಲಿಖಿತ ದಾಖಲೆ ಆಧಾರಗಳಿಲ್ಲದ ಊಹೆ. ಈ ಅಭಿಪ್ರಾಯವನ್ನು ತೇಲಿ ಬಿಟ್ಟವರು 1837ರ ಕೊಡಗು ಕೆನರಾ ರೈತ ಪ್ರತಿರೋಧದ ಬಗ್ಗೆ ಅಧ್ಯಯನ ನಡೆಸಿದ ನಮ್ಮ ಪರಿಸರದ ವಿದ್ವಾಂಸರೊಬ್ಬರು.

ಹೀಗೆ ದೂರದಲ್ಲಿ ನಿಂತು ನೋಡುವವರಿಗೆ ಪ್ರಚಲಿತ ಐತಿಹ್ಯ, ಪ್ರತೀತಿ ವದಂತಿಗಳ ಮೇಲೆದ್ದು ಕಂಡು ದೇವಿಪ್ರಸಾದರ ಮನೆ, ಮನೆತನಗಳು ಕುತೂಹಲಕಾರಿಯಾಗಿಯೆ ತೋರುತ್ತವೆ. ನನ್ನ ಬಾಲ್ಯದಲ್ಲಿ ದೇವಿಪ್ರಸಾದರನ್ನು ಹಲವಾರು ಬಾರಿ ನೋಡಿದ್ದೆ. ಕೆಲವೊಮ್ಮೆ ಅವರು ನನ್ನ ಸೋದರ ಮಾವಂದಿರಾದ ಎ. ಎಂ. ಆರ್. ಜನಾರ್ಧನ ಮತ್ತು ಎಂ. ಆರ್. ಬಾಲಕೃಷ್ಣ, ಇವರೊಂದಿಗೆ ಕಿರಿಯ ಒಡನಾಡಿಯಾಗಿರುತ್ತಿದ್ದರು. ದೇವಿಪ್ರಸಾದರನ್ನು ಕಂಡಾಗಲೆಲ್ಲ ಅವರ ಆಕರ್ಷಕ ವ್ಯಕ್ತಿತ್ವವನ್ನು ಮೀರಿ, '**ಅವರ ಮನೆಯಲ್ಲಿ ನಿಧಿಯಿರುವ ಕೊಪ್ಪರಿಗೆಯನ್ನು ಸಂಕೋಲೆಯಿಂದ ಬಿಗಿದು ಕಟ್ಟಿದ್ದಾರಂತೆ**' ಎಂಬ ವದಂತಿಯೇ ನನ್ನನ್ನು ಕಾಡುತ್ತಿತ್ತು.

ಸುಮಾರು 1992-93 ರಲ್ಲಿ ಸುಳ್ಯ ರೋಟರ್ಯಾಕ್ಟ್ ಸಂಸ್ಥೆ ನಮ್ಮ ಪರಿಸರದ ಜಾನಪದ ದಂತಕಥೆಗಳಾದ ದಿ. ಮಾವುಜಿ ನಂಜಪ್ಪ, ಕೋದನ ಗುಂಡಿ ಕೇಪಣ್ಣ ಗೌಡ ಮತ್ತು ಭೂತಕಲ್ಲು ಸುಬ್ರಾಯ ಗೌಡರನ್ನು ಸನ್ಮಾನಿಸುವ ಕಾರ್ಯಕ್ರಮವೊಂದನ್ನು ಆಯೋಜಿಸಿತ್ತು. ರೋಟರ್ಯಾಕ್ಟ್ ಸಂಸ್ಥೆಯ ಅಂದಿನ ಅಧ್ಯಕ್ಷರಾದ ಸಂಜೀವ ಕುದ್ಪಾಜೆಯವರೊಂದಿಗೆ ಸನ್ಮಾನ ಸಮಾರಂಭದ ಯಶಸ್ವಿಗಾಗಿ ನಾನೂ ಒಂದಿಷ್ಟು ಓಡಾಡಿದ್ದೆ. ದೇವಿಪ್ರಸಾದರನ್ನು ಕೊಂಚ ಹತ್ತಿರದಿಂದ ಆಗಲೇ ನಾನು ನೋಡಿದ್ದು, ನಮಗಾಗ ಕಾರ್ಯಕ್ರಮ ನಡೆಸಲು ಸಾಕಷ್ಟು ಹಣ ಸಂಗ್ರಹವಾಗಿರಲಿಲ್ಲ. ಆಗ ವೃದ್ಧಾಪ್ಯದಿಂದಲೂ ಅನಾರೋಗ್ಯದಿಂದಲೂ ಕಂದಿಹೋಗಿದ್ದ, ಒಂದು ಕಾಲದಲ್ಲಿ ಕಂಬಳ ಕ್ರೀಡೆಯಲ್ಲಿ ಮನೆ ಮಾತಾಗಿದ್ದ ಮಾವುಜಿ ನಂಜಪ್ಪನವರಿಗೆ ಚಿನ್ನದ ಕನ್ನಿಯಿಂದ ಹೊಲಿದ ಮಡಪ್ಪಾಳೆ ಕೊಟ್ಟು ಗೌರವಿಸುತ್ತೇವೆಂದು ಮೊದಲೆ ಘಂಟಾಘೋಷವಾಗಿ ಸಾರಿಯಾಗಿತ್ತು. ನಮ್ಮ ಚಿಂತನೆಯ ಹೊಸತನವನ್ನು ಕಂಡು ಸಂತಸಪಟ್ಟ ದೇವಿಪ್ರಸಾದರು ನಮ್ಮ ಸಂಕಷ್ಟಗಳನ್ನು ಅರ್ಥಮಾಡಿಕೊಂಡು ಆ ದಿನ ದೊಡ್ಡ ಮೊತ್ತವೊಂದನ್ನು ನೀಡಿದರಲ್ಲದೆ, ನಮಗೆ ನಷ್ಟವಾದಲ್ಲಿ ಭರಿಸುವುದಾಗಿಯೂ ಭರವಸೆ ಕೊಟ್ಟರು. ಇದರಿಂದ ಹೊಸ ಹುಮ್ಮಸ್ಸಿನಿಂದ ಕೆಲಸ ಮಾಡುವುದು ಸಾಧ್ಯವಾಯಿತಲ್ಲದೆ ದೇವಿ ಪ್ರಸಾದರ ಆಂತರ್ಯದ ಕೊಂಚ ಪರಿಚಯವೂ ನಮಗಾಯಿತು.

ಎನ್. ಎಸ್. ದೇವಿಪ್ರಸಾದರನ್ನು ಮತ್ತೆ ನಾನು ನೋಡಿದ್ದೇ, ಕೊಡಗಿನಲ್ಲಿ ಪ್ರತ್ಯೇಕತಾ ಹೋರಾಟದ ಭುಗಿಲೆದ್ದ ಸಮಯದಲ್ಲಿ. ಕೊಡಗಿನಲ್ಲಿ ಲಿವಾಕ್ (ಲಿಬರೇಷನ್ಸ್ ವಾರಿಯರ್ಸ್ ಆಫ್ ಕೂರ್ಗ್) ಎಂಬ ಸಂಘಟನೆ 1990 ರ ದಶಕದ ಆದಿಯಲ್ಲಿ ಪ್ರತ್ಯೇಕ ಕೊಡಗು ರಾಜ್ಯದ ಬೇಡಿಕೆಯನ್ನು ಮುಂದಿಟ್ಟಿತು. ತಾನು ಸಶಸ್ತ್ರ ಹೋರಾಟಕ್ಕೂ ಸಿದ್ಧ ಎಂಬ ಘೋಷಣೆಯನ್ನು ಹೊರಡಿಸಿದ ಈ ಸಂಘಟನೆ ತರುಣರಿಗೆ ಶಸ್ತ್ರಾಸ್ತ್ರ ತರಬೇತಿ ಕೊಡಲಾರಂಭಿಸಿತು. ಆದರೆ ಕುಶಾಲನಗರದಲ್ಲಿ ಷಣ್ಮುಗಂ ಎಂಬ ಕಾಂಗ್ರೆಸ್ ಯುವ ನಾಯ್ಕನ ಕೊಲೆಯಾಗಿ ನ್ಯಾಯಾಲಯದ ಕಟಕಟೆ ಹತ್ತುವುದರೊಂದಿಗೆ ಈ ಸಂಘಟನೆಗೆ ತೀವ್ರ ಹಿನ್ನಡೆಯುಂಟಾಯಿತು. ನಂತರ ಲೀವಾಕ್ ಕೆ. ಆರ್. ಎಂ. ಎಂ. (ಕೊಡಗು ರಾಜ್ಯ ಮುಕ್ತಿ ಮೋರ್ಚಾ) ಎಂಬ ಹೊಸ ಹೆಸರು ಪಡೆಯಿತು. ಸಶಸ್ತ್ರ ಕ್ರಾಂತಿಯ ಘೋಷಣೆಯ ಬದಲಿಗೆ ಅಹಿಂಸಾತ್ಮಕ ಹೋರಾಟದ ಮಂತ್ರ ಜಪಿಸಲಾಯಿತು. ಪ್ರಭಾಕರನ್,ಬಾಳ್ ಠಾಕ್ರೆ ಜಾಗದಲ್ಲಿ ಗಾಂಧಿ, ನೆಲ್ಸನ್, ಮಂಡೇಲಾ ಹೆಸರುಗಳನ್ನು ಉರುಹೊಡೆಯಲಾಯಿತು. ಆಗ ಕಾಫಿ ಮುಕ್ತ ಮಾರುಕಟ್ಟೆಯನ್ನು ಪ್ರವೇಶಿಸಿ ಅತ್ಯಧಿಕ ಮೌಲ್ಯ ಪಡೆಯಿತು.

ಕೊಡಗಿನ ಒಂದು ವರ್ಗದ ಜನ ಕುರುಡಾಗಿ ಕೆ. ಆರ್. ಎಂ. ಎಂ. ಸಂಘಟನೆಯನ್ನು ಬೆಂಬಲಿಸತೊಡಗಿದರು; ಕೇಳಿದ್ದಕ್ಕಿಂತಲೂ ಹೆಚ್ಚು ದೇಣಿಗೆ ನೀಡಿ ಪೋಷಿಸಲಾರಂಭಿಸಿದರು. 1956 ಕ್ಕಿಂತ ಹಿಂದೆ ಕೊಡಗು ಪ್ರತ್ಯೇಕ ಘಟಕವಾಗಿತ್ತು. ಕರ್ನಾಟಕದೊಂದಿಗೆ ವಿಲೀನವಾಗುವುದರ ಹಿಂದೆ ಅದೊಂದು ರಾಮರಾಜ್ಯವಾಗಿತ್ತು ಎಂಬ ಕೆ. ಆರ್. ಎಂ. ಎಂ. ನ ಹೇಳಿಕೆ ಜಮೀನ್ದಾರ ಶಾಹಿಯ ಪುನರುತ್ಥಾನಕ್ಕೆ ಪ್ರೇರಣಾ ಶಕ್ತಿಯಾಯಿತು. ಕೊಡಗು ಪ್ರತ್ಯೇಕವಾದರೆ ರಸ್ತೆಯುದ್ದಕ್ಕೂ ಚಿನ್ನದ ತಗಡನ್ನು ಹಾಕಬಹುದು. ಕೊಡಗು ಅತಿ ಹೆಚ್ಚು ತೆರಿಗೆಯನ್ನು ಪಾವತಿಸುತ್ತದೆ ಎಂಬ ಕೆ. ಆರ್. ಎಂ. ಎಂ.ನ ಮಾತನ್ನು ಶ್ರೀಮಂತ ವರ್ಗ ನಿಜವೆಂದೇ ನಂಬಿತು. ಇದರಿಂದ ಕೊಡಗಿನಲ್ಲಿ ಹೊಸತೊಂದು ಬದಲಾವಣೆಯ ಕನಸುಗಳು ಒಂದು ವಿಭಾಗದಲ್ಲಿ ಚಿಗುರೊಡೆಯತೊಡಗಿದರೆ, ಇನ್ನೊಂದೆಡೆ ಬಹುಸಂಖ್ಯೆಯ ಜನ ಸಮುದಾಯದ ಅನಿಸಿಕೆಗಳಿಗೆ ಬೆಲೆಯೆ

ಇಲ್ಲದಾಯಿತು. ಜತೆಗೆ ಇತಿಹಾಸದುದ್ದಕ್ಕೂ ಶೋಷಣೆಗೆ ಒಳಗಾದ ಸಮೂಹಗಳೆಲ್ಲ ಇನ್ನಷ್ಟು ಅವಹೇಳನಕ್ಕೆ ಈಡಾಗತೊಡಗಿದವು. ಸಮೂಹ ಮಾಧ್ಯಮದ ಕೆಲವು ಬೇಜವಾಬ್ದಾರಿ ಶಕ್ತಿಗಳು ಪ್ರತ್ಯೇಕತಾ ವಾದಕ್ಕೆ ಅನಗತ್ಯ ಪ್ರಾಶಸ್ತ್ಯ ನೀಡಿದವು. ಜಾರ್ಕಂಡ್ ಮುಕ್ತಿ ಮೋರ್ಚಾದ ಶಿಬು ಸೊರೆನ್ ತರಹದವರು ಪ್ರತ್ಯೇಕತಾ ವಾದಿಗಳಿಗೆ ಬೆಂಬಲ ನೀಡಿದರೆ, ಮಾವೋವಾದಿ ಕಮ್ಯೂನಿಷ್ಟರು ಅದಕ್ಕೊಂದು ಸೈದ್ಧಾಂತಿಕ ಸ್ವರೂಪ ನೀಡಲು ಪ್ರಯತ್ನಿಸಿದರು. ಈ ಹೊತ್ತಲ್ಲಿ ಕೊಡಗು ಪ್ರಜಾವೇದಿಕೆಯ ಸ್ಥಾಪನೆಯಾಯಿತು.

ಪ್ರತ್ಯೇಕತಾ ವಾದದ ವಿರುದ್ಧವಾಗಿ ಪ್ರತಿಭಟನೆಯನ್ನು ಆರಂಭಿಸಿದವರಲ್ಲಿ ಸಂಪಾಜೆಯ ಕನ್ನಡ ಸಂಘದ ಎನ್. ಎಸ್. ದೇವಿಪ್ರಸಾದ್ ಮೊದಲಿಗರು. ಇದೇ ವೇಳೆಗೆ 'ಕೊಡಗು ಮೂಲ ನಿವಾಸಿಗಳ ಸಂಘಟನೆ' ಎಂಬ ಸಂಸ್ಥೆಯನ್ನು ಅಂದಿನ ಹೆಗ್ಗಡೆ ಸಮಾಜದ ಅಧ್ಯಕ್ಷರಾದ ಕೆ. ಎಂ. ಸುಬ್ಬಯ್ಯ, ಐರಿ ಸಮಾಜದ ಅಧ್ಯಕ್ಷರಾದ ಕಾಮೆಯಂಡ ಮುತ್ತಣ್ಣ ಮತ್ತು ಅಮ್ಮ ಕೊಡವ ಸಮಾಜದ ಅಧ್ಯಕ್ಷರಾದ ಎನ್. ಬಿ. ಕೃಷ್ಣ ಜೊತೆ ಸೇರಿ ಸ್ಥಾಪಿಸಿ ಕೊಡಗು ಕರ್ನಾಟಕದ ಅವಿಭಾಜ್ಯ ಅಂಗ ಎಂದು ಘೋಷಣೆ ನೀಡಿದ್ದರು. ಇನ್ನೊಂದೆಡೆ ಕುಶಾಲನಗರದ ಕೆ. ಟಿ. ಸುಬ್ಬಯ್ಯ ಮತ್ತು ಅ. ಸು. ಬೋಪಣ್ಣ ಪ್ರತ್ಯೇಕತೆಯ ಬೇಡಿಕೆಯನ್ನು ವಿರೋಧಿಸತೊಡಗಿದರು.

ಈ ಎಲ್ಲ ಸಂಘಟನೆಗಳನ್ನು ಒಟ್ಟು ಸೇರಿಸಿ ಜಂಟಿ ಹೋರಾಟವನ್ನು ಆಯೋಜಿಸುವ ಕಲ್ಪನೆಯನ್ನು ಕಾರ್ಯರೂಪಕ್ಕೆ ಇಳಿಸಿದವರು ಇಂದು ಕರ್ನಾಟಕದ ಯುವ ಪೀಳಿಗೆಯ ಕ್ರಿಯಾಶೀಲ ವಿದ್ವಾಂಸರಲ್ಲೊಬ್ಬರಾದ ಇತಿಹಾಸ ಶಾಸ್ತ್ರಜ್ಞ ಡಾ. ತಂಬಂಡ ವಿಜಯ್ ಪೂಣಚ್ಚ. ಕೊಡಗು ಪ್ರಜಾವೇದಿಕೆಯ ಮೊದಲ ಸಾಲಿನ ಸಂಚಾಲಕರಿಬ್ಬರಲ್ಲಿ ಒಬ್ಬರಾಗಿ ನೇಮಕಗೊಂಡರು. ಅವರೊಂದಿಗೆ ಇನ್ನೊಬ್ಬ ಸಂಚಾಲಕನಾಗಿ ದುಡಿಯುವ ಜವಾಬ್ದಾರಿ ನನ್ನ ಮೇಲೆ ಹೊರಿಸಲ್ಪಟ್ಟಿತು. ಕೊಡಗಿನ ಪ್ರತ್ಯೇಕತಾವಾದಕ್ಕೆ ಸೈದ್ಧಾಂತಿಕವಾಗಿ ಪ್ರತಿರೋಧವನ್ನೊಡ್ಡಿದ ಪ್ರಜಾವೇದಿಕೆ ಈ ಹಿನ್ನಲೆಯಲ್ಲಿ ತಾತ್ವಿಕ ಒಳನೋಟಗಳನ್ನು ನೀಡುವ ಮತ್ತು ಪ್ರತ್ಯೇಕತೆಯಿಂದಾಗಿ ಕೊಡಗಿಗೆ ಆಗಬಹುದಾದ ಹಾನಿಗಳ ಬಗ್ಗೆ ಸೂಕ್ಷ್ಮ ವಿವರಗಳನ್ನು ತಿಳಿಸುವ ಹತ್ತು ಸಾವಿರ ಕಿರು ಹೊತ್ತಗೆಗಳನ್ನು (ಲೇಖಕ ಡಾ|| ತಂಬಂಡ ವಿಜಯ್ ಪೂಣಚ್ಚ) ಪ್ರಕಟಿಸಿ ಕೊಡಗಿನಾದ್ಯಂತ ಹಂಚಿತು. ಮುಂದೆ ಸೋಮವಾರ ಪೇಟೆಯಲ್ಲಿ ಎನ್.ಎಸ್. ದೇವಿಪ್ರಸಾದರ ಅಧ್ಯಕ್ಷತೆಯಲ್ಲಿ ಹದಿನೈದು ಸಾವಿರ ಜನಸ್ತೋಮ ಸೇರಿದ ಸಮ್ಮೇಳನವನ್ನು ಆಯೋಜಿಸಲಾಯಿತು.

ಎನ್. ಎಸ್. ದೇವಿಪ್ರಸಾದ್ ನೇತೃತ್ವದಲ್ಲಿ ಪ್ರಜಾವೇದಿಕೆ ಪ್ರತ್ಯೇಕತಾವಾದವನ್ನು ಬಗ್ಗು ಬಡಿಯಿತು. ಕಾರ್ಯ ಬಾಹುಳ್ಯದಿಂದ ನಂತರ ಅವರು ನೇಪಥ್ಯಕ್ಕೆ ಸರಿಯುವ ಇಚ್ಛೆಯನ್ನು ವ್ಯಕ್ತಪಡಿಸಿದರೂ, ದೇವಿಪ್ರಸಾದರನ್ನು ಮನವೊಲಿಸಿದ ಸಂಘಟನೆ ಅವರನ್ನು ಗೌರವಾಧ್ಯಕ್ಷರನ್ನಾಗಿ ಉಳಿಸಿಕೊಂಡಿತು.

ಈಗ ಸೋಮವಾರಪೇಟೆಯ ಕ್ರಿಯಾಶೀಲ ಮುಂದಾಳು ಮೂಡಗದ್ದೆ ಟಿ. ವಿಜಯೇಂದ್ರ ಪ್ರಜಾವೇದಿಕೆಯ ಅಧ್ಯಕ್ಷರಾಗಿದ್ದಾರೆ. ಆದರೆ ಪ್ರಜಾವೇದಿಕೆಯ ಎಲ್ಲ ಕೆಲಸ ಕಾರ್ಯಗಳ ಹಿಂದೆಯೂ ದೇವಿಪ್ರಸಾದ್ ಚಾಲನಾಶಕ್ತಿಯಾಗಿ ಗಾಢವಾಗಿ ತೊಡಗಿಸಿ ಕೊಂಡಿದ್ದಾರೆ. ಅದೂ ಪ್ರಜಾವೇದಿಕೆಯ ಸುದೈವವೆಂದೆ ನಾನು ಗ್ರಹಿಸಿದ್ದೇನೆ.

ಅಗರ್ಭ ಶ್ರೀಮಂತಿಕೆಯ ಹಿನ್ನಲೆಯಿದ್ದರೂ ಅವರ ವ್ಯಕ್ತಿತ್ವದಲ್ಲಿ ಜಮೀನ್ದಾರಶಾಹಿಯ ದರ್ಪಗಳಿಲ್ಲ. ಸುತ್ತಲಿನಜನ ಅಂತರವಿಟ್ಟುಕೊಂಡರೂ ತಾವೇ ಅವರ ಬಳಿ ಸಾಗಿ ರಂಗಭೂಮಿ, ಭೂತಾರಾಧನೆ, ಜಾನಪದ ಎಂದು ಆಪ್ತರಾಗತೊಡಗುತ್ತಾರೆ. ಆದರೆ ಯಾಕೋ, ಅದೇ ಜನ ಈತ ತಮ್ಮವನೆಂದು ಮುಗಿಬೀಳತೊಡಗಿದಾಗ, ಮುಜುಗರ ಪಡುವ ದೇವಿಪ್ರಸಾದ್ ತೀವ್ರ ಆತಂಕಕ್ಕೊಳಗಾದವರಂತೆ ಏಕಾಕಿತನ ಪೊರೆಯೊಳಗೆ ಹೂತು ಹೋಗುತ್ತಾರೆ. ಇದೊಂದೇ ಅವರ ದೌರ್ಬಲ್ಯ; ಅಥವಾ ಇದು ಅವರ ವೈವಿಧ್ಯಮಯ ಅಭಿರುಚಿಯ ವ್ಯಕ್ತಿತ್ವವನ್ನು ನಿರ್ವಹಿಸುವ ಅಂತರಂಗದ ಒಂದು ಆಯಾಮವಿದ್ದರೂ ಇರಬಹುದೇನೋ!

"ಅವರು ನಿಧಿಯ ಕೊಪ್ಪರಿಗೆಯನ್ನಂತೂ ಕಟ್ಟಿಹಾಕಿದ್ದಾರೆ."

ಲೇಖನ : ಕೆ. ಆರ್. ವಿದ್ಯಾಧರ, ಕಾರ್ಯದರ್ಶಿ, ಕೊಡಗು ಗೌಡ ವಿದ್ಯಾಸಂಘ, ಮಡಿಕೇರಿ

---

## -: ತಾಯಿ :-

ಎಲ್ಲ ಕಡೆಗೆ ಬರಲು ತನಗೆ
ಬಿಡುವು ಇಲ್ಲ ದೇವಗೆ
ಸೃಜಿಸಿದನೀ ದೀವಿಗೆ ।

ಹೊಟ್ಟೆಯಲ್ಲಿ ಹೊತ್ತು ಹೆತ್ತು
ಉಣಿಸಿ ಎದೆಯ ಅಮೃತವ
ಲಾಲಿ ಹಾಡಿ ತೂಗಿ ಬೆಳೆಸಿ
ಪ್ರೀತಿಧಾರೆ ಸುರಿಸುತ ||

ನುಡಿಗಳನ್ನು ಕಲಿಸಿ ನಡೆಸಿ
ತಿದ್ದಿ ದಾರಿ ತೋರುತ
ನೂರು ಕಾಲ ಬಾಳು ಎಂದು
ತುಂಬು ಮನದಿ ಹರಸುತ ।

ಬದುಕಿನಲ್ಲಿ ದಾರಿ ತೋರಿ
ನಡೆಸುವಂಥ ಕೈ ದೀವಿಗೆ
ಜನುಮ ಕೊಟ್ಟ ತಾಯಿಯೆ
ನಮನ ಆ ದೇವಿಗೆ ||

ಮಗುವಿಗಾಗಿ ತ್ಯಾಗಗೈವ
ಸಹನ ಮೂರ್ತಿ ತಾಯಿಗೆ
ಕೊಡಲಿ ಏನು ಉಡುಗೊರೆ
ಕೀರ್ತಿಯೆಂಬ ದೇಣಿಗೆ ।

- ತುಮ್ಮಜ್ಜೀರ ಲತ ಉಲ್ಲಾಸ್,
ಹಿನಕಲ್, ಮೈಸೂರು.

---

# ಕಾವೇರಿ ನಾಡು ಅಂದು - ಇಂದು - ಮುಂದೆ : ಒಂದು ವಿಶ್ಲೇಷಣೆ

ಬೆಂಗಳೂರಿನ ಅಮ್ಮಾಜಿ ಪೊನ್ನಪ್ಪನವರ ಕನಸಿನ ಕೂಸಾದ ಕಾವೇರಿನಾಡು ಅಂದು, ಹತ್ತು ಹಲವು ಆಸೆ ಆಕಾಂಕ್ಷೆಗಳನ್ನು ಹೊತ್ತು ಗೌಡ ಜನಾಂಗದ ಅಭಿವೃದ್ಧಿಗಾಗಿ 1996 ರಲ್ಲಿ ಕಟ್ಟಿದ ಈ ನಾಡು, ಅಂದು ಹೇಗಿತ್ತು? ಇಂದು ಹೇಗಿದೆ? ಮುಂದೆ ಹೇಗಿರಬಹುದು? ಎಂಬುದರ ಪಕ್ಷಿನೋಟವೇ ಈ ಲೇಖನವಾಗಿದೆ.

ಅಂದು ನಮ್ಮ ಜನಾಂಗ ಒಂದು ತರಹದಲ್ಲಿ ನಿದ್ರಿಸುತ್ತಿತ್ತು. ಯಾವುದೇ ಕಲೆ ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುತ್ತಿರಲಿಲ್ಲ. ಇದ್ದ ಸಮಾಜಗಳ ಕಟ್ಟಡಗಳ ರೂಪದಲ್ಲಿದ್ದವೇನೊ ನಿಜ, ಆದರೆ ನಮ್ಮ ಭಾಷೆಯ ಉಳಿವಿಗಾಗಿ ಅರೆಗನ್ನಡ ಭಾಷೆ ಮಾತನ್ನಾಡುವುದೇ ಒಂದು ಹೀನಾಯಕರ ಎಂಬ ಪರಿಸ್ಥಿತಿಯಲ್ಲಿದ್ದ ನಮ್ಮ ಜನಾಂಗವನ್ನು ಬಡಿದೆಬ್ಬಿಸಿ ಹಿಂದೆಂದೂ ಯಾರೂ, ಮಾಡದ ರೀತಿಯಲ್ಲಿ ನಮ್ಮ ಜನಾಂಗದ ಉಳಿವಿಗಾಗಿ ಶ್ರಮಿಸುತ್ತಿರುವವರೂ, ಬೇರೆಯಾರೂ ಅಲ್ಲ ಅವರೇ ಕಾವೇರಿ ನಾಡಿನ ಶಿಲ್ಪಿ, ಅಮ್ಮಾಜಿ ಪೊನ್ನಪ್ಪ ದಂಪತಿಗಳು.

1996 ರ ಸೆಪ್ಟೆಂಬರ್ 22 ರಂದು ಕಾವೇರಿ ನಾಡಿನಲ್ಲಿ ಸಂಘಟನಾ ದೃಷ್ಟಿಯಿಂದ ಮೊದಲು ಕೈಲು ಮುಹೂರ್ತ ಹಬ್ಬದ ಪ್ರಯುಕ್ತ, ಮುಖ್ಯ ಅತಿಥಿಗಳಲ್ಲಿ ಒಬ್ಬರಾಗಿ ಬೆಂಗಳೂರಿನ ಕೊಡಗು ಗೌಡ ಸಮಾಜದ ಅಧ್ಯಕ್ಷರಾಗಿದ್ದ ಶ್ರೀ ತೋಟಂಬೈಲು ಬೆಳ್ಯಪ್ಪನವರು ಆಗಮಿಸಿದ್ದರು. ಅಂದು ಬೆಳ್ಯಪ್ಪನವರು ಮಾತನಾಡುತ್ತಾ ನಮ್ಮ ಸಮಾಜ ಎಂಬ ಕಟ್ಟಡ ಕಟ್ಟಿ 29 ವರ್ಷಗಳು ಸಂದರೂ, ಸಹ ನಮ್ಮಿಂದ ಮಾಡಲಾಗದ ಅಭಿವೃದ್ಧಿಯನ್ನು ಪೊನ್ನಪ್ಪನವರು ಈ 3 ತಿಂಗಳಲ್ಲಿ ಮಾಡಿ ತೋರಿಸಿದ್ದಾರೆ" ಎಂದು ಹೊಗಳಿದ್ದರು. ಮುಂದುವರೆಯುತ್ತಾ ಮಣಿಪಾಲ್‌ನ ಪೈನವರು ಬೆಟ್ಟಗುಡ್ಡಗಳನ್ನು ಕಡಿದು ನಾಡಾಗಿ ಪರಿವರ್ತಿಸಿ, ಇಂದು ಯಾವ ಮಟ್ಟದಲ್ಲಿ ಬೆಳೆಸಿದ್ದಾರೊ, ಅದೇ ರೀತಿಯಲ್ಲಿ ಅಮ್ಮಾಜಿ ಪೊನ್ನಪ್ಪ ದಂಪತಿಗಳು ಈ ನಾಡು ಸುಂದರವಾಗಿ ಬೆಳೆಯಲಿ ಎಂದು ಶುಭ ಹಾರೈಸಿದ್ದರು.

ಅಂದು ನಮ್ಮ ಜನಾಂಗದಲ್ಲಿ ಮೂಡಿದ ಉತ್ಸಾಹದ ಚಿಲುಮೆಯನ್ನು ನೋಡಿ ಇದೇ ರೀತಿ ಇದ್ದಲ್ಲಿ ನಮ್ಮ ಜನಾಂಗ ಖಂಡಿತ ಏಳಿಗೆ ಹೊಂದುವುದರಲ್ಲಿ ಯಾವುದೇಸಂಶಯವೇ ಇಲ್ಲ, ಎಂದು ತಮ್ಮ ಧ್ಯೇಯ ಉದ್ದೇಶಗಳನ್ನು ನನಸು ಮಾಡಲು ಹೊರಟರು. ಅಂದಿನ ಕಾರ್ಯಕ್ರಮದಲ್ಲಿ ಜನರ ಪ್ರೋತ್ಸಾಹವನ್ನು ಕಂಡು ಆ ವೇದಿಕೆಯಲ್ಲಿಯೇ, ಇಲ್ಲೊಂದು ಆಂಗ್ಲ ಮಾಧ್ಯಮ ಶಾಲೆಯನ್ನು ಪ್ರಾರಂಭಿಸುತ್ತೇನೆಂದು ನೆರೆದಿದ್ದ ಜನರೆದುರು ವಚನ ಕೊಟ್ಟರು. ಜನ ಇವರ ಹುಮ್ಮಸ್ಸನ್ನು ಕಂಡು ಬೆಕ್ಕಸ ಬೆರಗಾಗಿ ಮೂಗಿನ ಮೇಲೆ ಬೆರಳಿಟ್ಟಿದ್ದರು.

ನಮ್ಮ ಜನಾಂಗವನ್ನೆಲ್ಲಾ ಒಂದೆಡೆ ನೆಲೆಸಿ, ಅದು ಬೆಳೆದು ಮುಂದೆ ಕಾವೇರಿನಾಡು, ಗೌಡನಾಡು ಆಗಬೇಕೆಂಬ ಕನಸಿನಲ್ಲಿ, ಈ ಕಾವೇರಿ ನಾಡಿನಲ್ಲಿ ಕೇವಲ ರೂ 25000/- ಕ್ಕೆ ನಿವೇಶನವನ್ನು ನೀಡಿ ಒಂದು ನೂರರಿಂದ ಹಿಡಿದು, ನಾಲ್ಕೈದು ಸಾವಿರದವರೆಗೆ, ಮುಂಗಡ ಹಣ ಪಡೆದು, ಅಧ್ಯಕ್ಷರ ಸಮ್ಮುಖದಲ್ಲೇ ನೂರಕ್ಕೂ ಹೆಚ್ಚು ಗೌಡ ಬಾಂಧವರಿಗೆ ನಿವೇಶನವನ್ನು ಹಂಚಲಾಯಿತು. ಈ ನಾಡು ಇದೀಗ 622 ನಿವೇಶನಗಳನ್ನು ಹೊಂದಿರುವುದು ನಿಜಕ್ಕೂ ದೊಡ್ಡ ಸಂಗತಿಯಾಗಿದೆ. ಅಂದು ಪೊನ್ನಪ್ಪನವರ, ಪರಿಶ್ರಮಕ್ಕೆ ತಕ್ಕ ಫಲ ಸಿಕ್ಕಿತು. ನಮ್ಮ ಜನಾಂಗವನ್ನು ಮುನ್ನಡೆಸಲು ಒಬ್ಬ ಸೂತ್ರಧಾರಿಯ ಪಾತ್ರವನ್ನು ವಹಿಸಿದ್ದರು ಈ ಪೊನ್ನಪ್ಪ ದಂಪತಿಗಳು.

ಅನಂತರ 1997 ರ ಸೆಪ್ಟೆಂಬರ್‌ನಲ್ಲಿ ನಡೆಸಿದ ಕೈಲು ಮುಹೂರ್ತ ಕಾರ್ಯಕ್ರಮದಲ್ಲಿ ಎರಡು ದಿಕ್ಕಿಗೆ ಮುಖ ಮಾಡಿ ನಿಂತ ಕೊಡಗು ಗೌಡ ಸಮಾಜದ ಅಧ್ಯಕ್ಷ ಪೂಜಾರಿ ಮೊಣ್ಣಪ್ಪ ಹಾಗೂ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಅಧ್ಯಕ್ಷ, ತೋಟಂಬೈಲು ಬೆಳ್ಯಪ್ಪನವರನ್ನು ಒಂದೆ ವೇದಿಗೆ ಮೇಲೆ ಆಹ್ವಾನಿಸಿ ಸಂಘಟನೆಗೆ ಪ್ರಯತ್ನಿಸಿದ್ದರು. ನಮಗೆ ಬೇಕಾದ್ದು ನಮ್ಮ ನಮ್ಮಲ್ಲೇ, ಸ್ಪರ್ಧೆಯಲ್ಲ, ನಮ್ಮ ಜನಾಂಗದ ಅಭಿವೃದ್ಧಿ ಎಂಬುದನ್ನು ತೋರಿಸಿಕೊಟ್ಟರು. ಅಂದಿನ ಕಾರ್ಯಕ್ರಮದಲ್ಲಿ ದಂಬೆಕೋಡಿ ಮಾದಪ್ಪ, ಸಂಪಾಜೆಯ ದೇವಿಪ್ರಸಾದ್ ಹಾಗೂ ಇನ್ನೀತರ ಹಲವಾರು ಗಣ್ಯರೆಲ್ಲಾ ಹಾಜರಿದ್ದು ಶುಭ ಹಾರೈಸಿದ್ದರು. ನೆರೆದಿದ್ದ ಸಮಸ್ತ ಜನರಿಗೆ ಉಚಿತವಾದ ವಸತಿ, ವಾಹನ, ಆಹಾರದ ಸೌಲಭ್ಯವನ್ನು ಪೊನ್ನಪ್ಪನವರು ಒದಗಿಸಿ ಕೊಟ್ಟಿದ್ದರು. ಇದಕ್ಕೆ ಬಹುಶಃ ಒಂದು ಸಮಾರಂಭಕ್ಕೆ ಒಂದು ಒಂದೂವರೆ ಲಕ್ಷದ ಮೇಲೆ ಖರ್ಚಾಗಿದ್ದರೂ, ಸಹ ಲೆಕ್ಕಿಸದೇ ನಾಲ್ಕು ಸರ್ತಿ ಈ ತರಹದ ಕಾರ್ಯಕ್ರಮ ಹಮ್ಮಿಕೊಂಡದ್ದು ಶ್ಲಾಘನೀಯ ಕಾರ್ಯ ಎನ್ನಬೇಕು. ಅಂದು ಕಾರ್ಯಕ್ರಮದಲ್ಲಿ ಬೇರೆಯವರ ಹಾಡಿಗೆ ನಾವೇಕೆ ನೃತ್ಯ ಮಾಡಬೇಕೆಂದು ಯೋಚಿಸಿದ ಪೊನ್ನಪ್ಪನವರು "ಜ್ಯೋತಿಯ ಬೆಳಗೋಣ" "ನೋಡು ಬಾ ಈ ನಾಡ" ಹಾಡು ಕಟ್ಟಿ, ಕುಪ್ಪಸದಟ್ಟಿ ಸಮೇತ ನರ್ತಿಸಿದ ನೃತ್ಯವು ನೆರೆದಿದ್ದ ಜನರನ್ನು ಆಶ್ಚರ್ಯದ ಕಡಲಿನಲ್ಲಿ ತೇಲಿಸಿತು. ಆ ಹಾಡಿನ ಕ್ಯಾಸೆಟ್‌ಗಾಗಿ ಒಂದೇ ಸಮ ಬೇಡಿಕೆ ಬಂದದ್ದರಿಂದ ಇವರು ಧ್ವನಿಸುರುಳಿ ಮುದ್ರಣಕ್ಕೆ ಕೈ ಹಚ್ಚ ಬೇಕಾಯಿತು.

1997 ರ ಪೂರ್ವಾದ ಸಮಯದಲ್ಲಿಯೇ "ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆ ಪ್ರಾರಂಭವಾಗಿತ್ತು. ಪತ್ರಿಕೆಯಲ್ಲಿನ ಅಪಾರ ಪ್ರಚಾರ, ಇವರನ್ನು ಪ್ರತಿಯೊಬ್ಬ ಗೌಡ ಬಂಧುಗಳಿಗೆ ಪರಿಚಯ ಮಾಡಿಕೊಟ್ಟಿತು. ಪತ್ರಿಕೆಯ ಲೇಖನಿಯು ಕಾಗದ ಹಿಡಿದು ಜನರನ್ನು ಎಚ್ಚರಗೊಳಿಸುತ್ತಿದ್ದಾಗ, ಅತ್ತ

ಬೆಂಗಳೂರಿನಲ್ಲಿ ಪೊನ್ನಪ್ಪನವರು ಅದನ್ನು ಸ್ವತಃ ಕಾರ್ಯರೂಪಕ್ಕೆ ತರುವುದರಲ್ಲಿ ಯಶಸ್ವಿಯಾಗಿ, ಪತ್ರಿಕೆಯ ಬ್ರಹ್ಮಾಸ್ತ್ರವಾಗಿ, ಪತ್ರಿಕೆಯಲ್ಲಿನ ಪ್ರತಿಯೊಂದು ಸಂಪಾದಕೀಯವನ್ನು ಕಾರ್ಯಗತಗೊಳಿಸುವುದರಲ್ಲಿ ಯಶಸ್ವಿಯಾದರು. ಸಮಾಜ ನೆಲಗುದಿಗೆ ಬಿದ್ದಿದ್ದ ಸಮಯದಲ್ಲಿ, ಸಮಾಜದ ಉದ್ಧಾರಕ್ಕೆ ಫೀನಿಕ್ಸ್ ಪಕ್ಷಿಯಂತೆ ಶ್ರಮಿಸಿದರು. ಜನರನ್ನು ಬಡಿದೆಬ್ಬಿಸುವ ಈ ನೃತ್ಯಕ್ಕೆ ಕೊಡಗಿನ ಹಲವಾರು ಕಡೆಯಿಂದ ಆಹ್ವಾನ ಬಂದದ್ದು ಇವರಿಗೆ ಮತ್ತಷ್ಟು ಪ್ರೋತ್ಸಾಹ ಸಿಕ್ಕಿದಂತಾಯಿತು.

1998 ರಲ್ಲಿ ಮಡಿಕೇರಿಯ ದಸರಾ ಕಾರ್ಯಕ್ರಮದಲ್ಲಿ ಇವರ ನೃತ್ಯಕ್ಕೆ 8 ನಿಮಿಷ ಅವಕಾಶ ಕೊಟ್ಟಿತು. ಅಷ್ಟು ದೂರದಿಂದ ಬಂದು, ಕೇವಲ 8 ನಿಮಿಷ ಸಾಲುವುದಿಲ್ಲವೆಂದು ವಿನಂತಿ ಮಾಡಿಕೊಂಡು 'ಜ್ಯೋತಿಯ ಬೆಳಗೋಣ' 'ಸುಗ್ಗಿ ಸುವ್ವಾಲೆ ಕುಣಿತ' 'ನಮ್ಮದು ಇದು ನಮ್ಮದು' ಹಾಡಿಗೆ 21 ಜನ ಸದಸ್ಯರು ತಕ್ಕ ಸಾಂಪ್ರದಾಯಿಕ ವೇಷ ಭೂಷಣಗಳೊಂದಿಗೆ, ಕುಣಿದಾಗ ಮೊದಲೆರಡು ನೃತ್ಯಕ್ಕೆ, ಸೂಜಿಬಿದ್ದರೂ, ಕೇಳಿಸದಷ್ಟು ಮೌನ ಹೊಂದಿದ ಜನ, 3 ನೇ ನೃತ್ಯಕ್ಕೆ ಮತ್ತೊಂದು ಪಂಗಡವೂ ಉರಿದೆದ್ದಾಗ, ಇವರುಗಳೆಲ್ಲಾ ನೃತ್ಯ ಮುಗಿದ ಕೂಡಲೆ ತಮಗೆ ವ್ಯವಸ್ಥೆ ಪಡಿಸಿದ ವಸತಿಯತ್ತ ತೆರಳಬೇಕಾಯಿತು. ಮಡಿಕೇರಿ ದಸರಾದಲ್ಲಿ ಗೌಡರು, ಗೌಡ ಸಂಸ್ಕೃತಿಯಲ್ಲಿಕೊಟ್ಟ ಮೊದಲ ಕ್ರಾಂತಿಕಾರಕ ನೃತ್ಯ ಕಾರ್ಯಕ್ರಮ ಅದಾಗಿತ್ತು.. ದೂರದಿಂದ ರಾತ್ರಿಯಲ್ಲಿ ನೋಡಿದವರಿಗೆ ಅದರ ಇಂಪು, ಕಂಪು ಇನ್ನೂ ಹಚ್ಚ ಹಸಿರಾಗಿರಬಹುದು. ಅಷ್ಟೊಂದು ಸುಂದರವಾಗಿತ್ತು.

ಹೀಗೆ ಇವರು ಗೌಡ ಸಾಂಸ್ಕೃತಿಕ ಕಾರ್ಯಕ್ರಮವನ್ನು ಪೆರಾಜೆ, ಕುಂಬಳಚೇರಿ, ಹಾಸನ, ಕುಶಾಲನಗರ, ಮರಗೋಡು ಸೋಮವಾರಪೇಟೆ, ಭಾಗಮಂಡಲ, ಸುಳ್ಯ, ಪಿರಿಯಾಪಟ್ಟಣ, ಮೈಸೂರು, ಬೆಂಗಳೂರು, ಹೀಗೆ ಹಲವೆಡೆ ನಡೆಸಿ ಕೊಟ್ಟದ್ದು ನಿಜಕ್ಕೂ ಹೆಮ್ಮೆಯ ಸಂಗತಿಯೇ ಸರಿ. ಜೊತೆ-ಜೊತೆಗೆ ಕಾವೇರಿ ನಾಡು ಆಂಗ್ಲ ಮಾಧ್ಯಮ ಶಾಲೆಯನ್ನು 1997 ರಲ್ಲಿ ಪ್ರಾರಂಭಿಸಿ ಇಂದು 6 ನೇ ತರಗತಿಯಲ್ಲಿ ನಡೆಯುತ್ತಿದೆ. ಹೀಗೆ ವರ್ಷಾನುವರ್ಷ ಕಾರ್ಯಕ್ರಮಗಳು ಅವಿರತವಾಗಿ ನಡೆದು ಬಂದಿರುವುದಕ್ಕೆ ಬೆಂಗಳೂರಿನ ಕಾವೇರಿ ನಾಡು ಸಾಕ್ಷಿಯಾಗಿ ನೆಲಮಂಗಲದಲ್ಲಿ ನಿಂತಿದೆ.

ಇಂದು ಇವರು ಆಂಗ್ಲ ಮಾಧ್ಯಮ ಶಾಲೆಯನ್ನು ಅಭಿವೃದ್ಧಿ ಪಡಿಸಿ "ಕಾವೇರಿ ನಾಡು ಆಂಗ್ಲ ಮಾಧ್ಯಮ ವಸತಿ ಶಾಲೆ"ಯನ್ನಾಗಿ ಮಾಡಲು ಶ್ರಮಿಸುತ್ತಿದ್ದಾರೆ. ವಸತಿ ಶಾಲೆಯಾದರೆ ಮಕ್ಕಳಿಗೆ ಸರ್ವಾನುರೀತಿಯಲ್ಲಿ ಅನುಕೂಲವಾಗುವುದೆಂದು ಮನಗೊಂಡು ಈ ಪರಿವರ್ತನೆಗೆ ಕೈ ಹಾಕಿದ್ದಾರೆ.

ನಿವೇಶನ ಹಂಚಿಕೆಯಲ್ಲಿ ಗೌಡ ಜನಾಂಗವನ್ನು ಆಕರ್ಷಿಸಿ ಒಂದೆಡೆ ನೆಲೆಗೊಳಿಸಲು ಪ್ರಯತ್ನಿಸಿದರೂ, 622 ಜನರಲ್ಲಿ ಕೇವಲ 64 ಜನರು ಮಾತ್ರ ನೋಂದಣಿ ಮಾಡಿಸಿಕೊಂಡಿದ್ದು, ಉಳಿದವರು ರೂ 100-200-1000-5000 ಹೀಗೆ ಮುಂಗಡ ಮೊತ್ತ ಕೊಟ್ಟು ಹಾಗೆ ಉಳಿಸಿ ಕೊಂಡಿರುವುದು ವಿಶಾದನೀಯ. ರೂ 25000/- ದ ಈ ನಿವೇಶಗಳೆಲ್ಲವೂ ನೋಂದಣಿ ಮಾಡಿಸಿ ನಿವೇಶನದಾರರು ಸಹಕರಿಸಿದ್ದಲ್ಲಿ ಕಾವೇರಿ ನಾಡು ಗೌಡ ನಾಡಾಗುವುದರಲ್ಲಿ ಯಾವುದೇ ಸಂಶಯ ಇಲ್ಲ. ಇನ್ನೊಂದು ಪ್ರಮುಖ ವಿಷಯ ಎಂದರೆ ಈ ನಿವೇಶನಗಳು ಗೌಡ ಬಾಂಧವರಿಗೆ ಮಾತ್ರವಲ್ಲದೆ, ಉಳಿದವರ್‍ಯಾರಿಗೂ ನೀಡಿರುವುದಿಲ್ಲ. ಇವರು ಸಾಧಿಸಿದ ಅಭಿವೃದ್ಧಿ ಸಾಧನೆಯು ಗೌಡ ಜನಾಂಗಕ್ಕೆ ಹೋಗುವುದೇ ವಿನಃ ಹ ಮತ್ಯಾರಿಗೂ ಅಲ್ಲವೆಂಬ ಅಂಶವನ್ನು ನಾವಿಲ್ಲೀಗ ಗಮನಿಸಬೇಕು.

ಆದರೆ ಇಂದು ನಮ್ಮ ಜನರಿಗೆ ಏನಾಗಿದೆ? ನಮ್ಮಲ್ಲಿ ಇಂತಹ ಚಟುವಟಿಕೆಗಳಲ್ಲಿ, ಮುಂದೆ ಬರುವುದು ವಿರಳವಾಗಿರುವಾಗ, ಅಂತಹದರಲ್ಲಿ ಏಡಿಯ ಹಾಗೆ ಮುಂದೆ ಬರುವವರ ಕಾಲೆಳೆದು, ತಾವೂ ಮುಂದೆ ಬರದೆ, ಇನ್ನೊಬ್ಬರನ್ನು ಬಿಡದೆ, ಒಂದೇ ಹೊಂಡದಲ್ಲಿ ಬಿದ್ದು ಹೊರಳಾಡುವುದು ಎಷ್ಟು ಸರಿ? ಜನಾಂಗದ ಏಳಿಗೆಗಾಗಿ ಶ್ರಮಿಸುತ್ತಿರುವ ಇವರಿಗೆ "ದುಡ್ಡು ಮಾಡಲು ಹೊರಟಿದ್ದಾರೆ" ಎಂಬ ಬಿರುದು ಬೇರೆ. ಮೇಲಿನ ಎಲ್ಲಾ ಕಾರ್ಯಕ್ರಮಗಳ ವರದಿಯನ್ನು ಒಮ್ಮೆ ಓದಿದ ಚಿಕ್ಕ ಮಕ್ಕಳಿಗೂ ಇಲ್ಲಿ ದುಡ್ಡು ಮಾಡಲು ಅವಕಾಶ ಹೆಚ್ಚೊ...... ಹಣ ಕಳೆದು ಕೊಳ್ಳುವ ಸಂಭವ ಹೆಚ್ಚೊ..... ಎಂಬ ಅರಿವು ಮೂಡುತ್ತದೆ.

ಪ್ರಸ್ತುತ ಇವರ ಪತ್ನಿ ನಿಮ್ಹಾನ್ಸ್‌ನಲ್ಲಿ ಹಿರಿಯ ಶುಶ್ರೂಕಿ ಆಗಿದ್ದು, ಮಕ್ಕಳು 8 ಮತ್ತು 9 ನೇ ತರಗತಿಯಲ್ಲಿ ಓದುತ್ತಿದ್ದು, ವೃತ್ತಿ ಉದ್ಯೋಗಕ್ಕೋಸ್ಕರ, ಹಾಲಿ, ಜಯನಗರದಲ್ಲಿ ವಾಸಿಸುತ್ತಿದ್ದಾರೆ. ಪೊನ್ನಪ್ಪನವರು ಮಾತ್ರ ಬೆಂಗಳೂರಿನಿಂದ 40 ಕಿ. ಮೀ. ದೂರದಲ್ಲಿರುವ ಕಾವೇರಿ ನಾಡಿನ ಅಭಿವೃದ್ಧಿಗಾಗಿ ಅಲ್ಲಿಯೆ ಬಹಳಷ್ಟು ಸಮಯ ಇದ್ದು ಅವಿರತವಾಗಿ, ದುಡಿಯುತ್ತಿರುವುದನ್ನು ಕಣ್ಣಾರೆ ಕಾಣಬಹುದು. ಇವರು ಎರಡೂ ಕಡೆ ಇರಬೇಕಾದ ಅಗತ್ಯವೂ ಹೌದು, ಅನಿವಾರ್ಯವೂ ಹೌದು.

ಅಮ್ಮಾಜಿ ಪೊನ್ನಪ್ಪನವರು ನಟ, ನಿರ್ಮಾಪಕ, ನಿರ್ದೇಶಕರಾಗಿ ನಟಿಸಿದ ಕೊಡಗಿನ ಸಂಸ್ಕೃತಿ ಸಾರುವ "ಚೆಲುವನಾಡ ಐಸಿರಿ" 16 ಕಂತುಗಳಲ್ಲಿ DD9 (ಚಂದನ)ದಲ್ಲಿ ಪ್ರಸಾರ ಗೊಂಡಿತು.

ಇವರು ಹಲವಾರು ಧ್ವನಿಸುರುಳಿಗಳನ್ನು ಹೊರ ತಂದಿದ್ದಾರೆ. ಅವುಗಳು, ಪೊನಿಧ್ವನಿ, ಮಲೆನಾಡ ಮಲ್ಲಿಗೆ, ಕಾವೇರಿ ನಾಡ ಐಸಿರಿ, ಕೊಡಗು ಜಾನಪದ ಗೀತೆ, ಪೊನ್ ಕೊಡವ ಧ್ವನಿ, ಕೊಡವ ಭಾಷೆಯಲ್ಲಿದ್ದು, ಇದು ನಮ್ಮ ಪೊನಿಧ್ವನಿಯ ತರ್ಜುಮೆ ಆಗಿದ್ದು, ಇಂದು ಪ್ರತಿಯೊಬ್ಬ ಕೊಡಗರ ಮನೆಯಲ್ಲಿ ಈ ಧ್ವನಿಸುರುಳಿ ಇದೆ. ಅದು ನಮ್ಮವರು ಮಾಡಿರುವುದು ನಮಗೆ ಹೆಮ್ಮೆ ತರುವ ವಿಷಯ ವಲ್ಲವೆ ?

ನಮ್ಮ ಗೌಡ ಜನಾಂಗದ ಅಭಿವೃದ್ಧಿಗಾಗಿ ಇವರು ಸಾಕಷ್ಟು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಾಕಿಕೊಂಡು, ಧ್ವನಿ ಸುರುಳಿ, ಧಾರವಾಹಿ, ಹೀಗೆ ಬಹಳಷ್ಟು ಶ್ರಮಿಸುತ್ತಿದ್ದಾರೆ. ಇಂದು ಬಾಯಲ್ಲಿಹತ್ತು ಹಲವು ಆಶ್ವಾಸನೆಗಳನ್ನು ಕೊಟ್ಟು

ತಿರುಗುತ್ತಿರುವ ಪುಡಾರಿಗಳಿಗೆ ಕರೆದು ಹಾರ ಹಾಕುತ್ತಿರುವ ಜನ, ಅವಿರತವಾಗಿ ದುಡಿಯುತ್ತಿರುವ ಇವರಿಗೆ ಒಂದು ಸನ್ಮಾನವನ್ನೂ ಮಾಡದಿರುವುದು ವಿಷಾದನೀಯ! ಅಂತಹದ್ದನೆಲ್ಲಾ ನಿರೀಕ್ಷಿಸದ ಇವರು ಬಯಸುವುದು ಪ್ರರಿಶ್ರಮಕ್ಕೆ ತಕ್ಕ ಫಲ ಮತ್ತು ಗೌಡ ಜನಾಂಗದ ಅಭಿವೃದ್ಧಿಯನ್ನಷ್ಟೆ.

ನಿವೇಶನದಾರರಿಂದ ಕುಂಠಿತ ಗೊಂಡಿರುವ ಬಾಕಿ ಹಣವನ್ನು ನಿವೇಶನದಾರರು ಕೂಡಲೆ ಪಾವತಿಸಿ ಸಹಕರಿಸು ವಂತಾಗಲಿ, ಇವರ ಕಾವೇರಿ ನಾಡಿನ ಆಂಗ್ಲ ಮಾಧ್ಯಮ ವಸತಿ ಶಾಲೆ ಅಭಿವೃದ್ಧಿ ಹೊಂದಿ ಮತ್ತಷ್ಟು ಬೆಳೆದು, ಬರುವ ಎಲ್ಲಾ ಅಡೆತಡೆಗಳನ್ನು ಮೆಟ್ಟಿ ನಿಲ್ಲುವಂತಾಗಲಿ, ಅಲ್ಲದೆ ನಮ್ಮ ಜನಾಂಗದಲ್ಲಿ ಯಾರೊಬ್ಬರು ಈವರೆಗೆ ಮಾಡದ ಹಲವು ಅಭಿವೃದ್ಧಿ ಕಾರ್ಯಗಳನ್ನು ಇವರು ಮಾಡಿದ್ದು ಮುಂದೆಯೂ ಇದನ್ನು ಉಳಿಸಿ ಬೆಳೆಸಿಕೊಂಡು ಹೋಗುವಂತಾಗಲಿ ಎಂದು ಸಂಗಾತಿ ಹಾರೈಸುತ್ತದೆ.

ಲೇಖಿನ: ಮೂಡಗದ್ದೆ ಕೃಪಾ.

## ಪತ್ರ ವಿಭಾಗ :-




*ವಂದನೆಗಳು,*

ಕೊಡಗು ಮತ್ತು ಮಂಡ್ಯ ಕಾವೇರಿ ಕಲಾ ಉತ್ಸವ ಮಂಡ್ಯ ಇವರು ನಡೆಸಿದ ರಂಜನೀಯ ಜಾನಪದ ಕಾರ್ಯಕ್ರಮದಲ್ಲಿ ಭಾಗವಹಿಸಲು ನಮಗೆ ಅವಕಾಶ ಮಾಡಿಕೊಟ್ಟ ಶ್ರೀ ಮೂಡಗದ್ದೆ ವಿಜಯೇಂದ್ರ ಇವರಿಗೆ ನಮ್ಮ ಹೃದಯಪೂರ್ವಕ ವಂದನೆಗಳು. ಕೊಡಗಿನ 18 ಜನಾಂಗದವರ ಸಮಿತಿಯಲ್ಲಿ ನಮ್ಮ ಗೌಡ ಸಂಸ್ಕೃತಿಯ ಬಗ್ಗೆ ವಿಶೇಷ ಆಸಕ್ತಿ ವಹಿಸಿ 4 ಮಂದಿ ಮಹಿಳೆಯನ್ನು ಸೇರಿಸಿದ ಕೋಡಿ ಚಂದ್ರಶೇಖರರಿಗೂ, ನಾನು ಸಂಗ್ರಹಿಸಿ ಬರೆದ ಭತ್ತ ಕುಟ್ಟುವ ಕೋಲಾಟದ ಹಾಡನ್ನು ಇಂಪಾಗಿ ಹಾಡಿದ ಶ್ರೀಮತಿ ಮಳ್ಳಂಡ್ರ ರೇಖಾ, ಕುಟ್ರತನ ಲತ ಇವರಿಗೂ, ಉತ್ತಮ ಶೈಲಿಯಲ್ಲಿ ಕೋಲಾಟವಾಡಿದ ಕೋಳುಮುಡಿಯನ ನೂತನ್ ತಂಡದ ಯುವತಿಯರಿಗೂ, ನನ್ನ ಸಂಗ್ರಹದ ಒಲೆ ಪೂಜೆ ಮತ್ತು ಧಾರೆ ಈ ಸೋಬಾನೆಗಳನ್ನು ಹಾಡಿದ ಈ ತಂಡದ ಮಹಿಳಾ ಸದಸ್ಯೆಯರಿಗೂ, ಮೆರವಣಿಗೆಯ ದೃಶ್ಯ ಫೋಟೋವನ್ನು ಶಕ್ತಿಪತ್ರಿಕೆಯಲ್ಲಿ ಪ್ರಕಟಿಸಿದ ಶ್ರೀ ಸೋಮೇಶ್ ಮತ್ತು ಇ. ಕೆ. ತಿಮ್ಮಪ್ಪ ಇವರಿಗೂ ಎರಡು ದಿನವೂ ನಮ್ಮೊಡನೆ ಇದ್ದು ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕ ಶ್ರೀ ಪಟ್ಟಡ ಪ್ರಭಾಕರನವರ ಪ್ರೋತ್ಸಾಹ ಸಲಹೆ ಸಹಕಾರಕ್ಕೂ ಮಂಡ್ಯ ಕಲಾ ಉತ್ಸವ ಸಮಿತಿಯ ಎಲ್ಲಾ ಸಮಿತಿ ಸದಸ್ಯರಿಗೂ ಕೊಡಗು ಗೌಡ ಜನಾಂಗದ ಪರವಾಗಿ ಕುಲಗುರು ಶ್ರೀ ವೆಂಕಟರಮಣಸ್ವಾಮಿ ಯಶಸ್ಸನ್ನು ನೀಡಲೆಂದು ಪ್ರಾರ್ಥಿಸುತ್ತಾ ಈ ಮೂಲಕ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇನೆ.

- ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಕೊಡಗು ಗೌಡ ಮಹಿಳಾ ಒಕ್ಕೂಟ, ಮಡಿಕೇರಿ.

# ಉದಾರಿಗಳು ಸಮಾಜ ಸೇವಕರು ಆದ ಶಿರಗಜೆ ಚಿಣಪ್ಪ ದಂಪತಿಗಳು



ಇವರು ಭಾಗಮಂಡಲ ನಾಡು, ಚೆರಂಗಾಲ ಗ್ರಾಮದಲ್ಲಿ ಶಿರಗಜೆ ಅಚ್ಚಪ್ಪನವರ ಪುತ್ರರಾಗಿ 21-11-1937 ರಲ್ಲಿ ಜನಿಸಿದರು. ಪ್ರಸ್ತುತ ಬೆಂಗಳೂರಿನಲ್ಲಿ ನೆಲೆಸಿರುವ ಇವರು, 1958 ರಲ್ಲಿ ಅರಣ್ಯ ಇಲಾಖೆಯಲ್ಲಿ ಫಾರೆಸ್ಟ್ ಗಾರ್ಡ್ ಆಗಿ ಆಯ್ಕೆ ಆದರು. ಆನಂತರ 1962 ರಲ್ಲಿ ಪಬ್ಲಿಕ್ ಸರ್ವೀಸ್ ಕಮೀಷನ್‌ನಲ್ಲಿ ಫಾರೆಸ್ಟರ್ ಆಗಿ ದಾಂಡೇಲಿಯಲ್ಲಿ ತರಬೇತಿ ಪಡೆದರು. ತದ ನಂತರ 1980 ರಲ್ಲಿ ರೇಂಜ್ ಫಾರೆಸ್ಟ್ ಆಫೀಸರಾಗಿ ಆಯ್ಕೆಯಾಗಿ, ಅರಣ್ಯ ಇಲಾಖೆಯಲ್ಲಿ ಅವಿರತವಾಗಿ ದುಡಿದು 37 ವರ್ಷಗಳ ಕಾಲ ಸೇವೆ ಸಲ್ಲಿಸಿ 1995ರ ನವಂಬರ್‌ನಲ್ಲಿ, ನಿವೃತ್ತರಾಗಿದ್ದಾರೆ.

ಶ್ರೀಯುತ ಚಿಣ್ಣಪ್ಪನವರನ್ನು ತಿಳಿಯದವರೇ ವಿರಳವೆನ್ನಬೇಕು. ಉದಾರ ಮನೋಭಾವದ ಇವರು, ಕೈ ನೀಡಿ ಸಹಕರಿಸಿ ಬಂದವರಿಗೆ ಇಲ್ಲ ಎಂದವರೇ ಅಲ್ಲ, ಸಮಾಜ ಸೇವಕರಾದ ಇವರಂತಹವರು ಇಂದು ನಮ್ಮ ಸಮಾಜದಲ್ಲಿ ಸಿಗುವುದು ಅಪರೂಪವೇ ಸರಿ.

ಚಿನ್ನಪ್ಪನವರು ಕುಂಬಳಧಾಳು ಗ್ರಾಮದ ದಂಬೆಕೋಡಿ ಗಣಪತಿಯವರ ಪುತ್ರಿ ಬೋಜಮ್ಮನವರನ್ನು ಲಗ್ನವಾಗಿದ್ದಾರೆ. ಒಂದು ಹೆಣ್ಣು, 2 ಗಂಡು ಮಕ್ಕಳು ಇದ್ದು ಮಗಳು ಸುಮಿತ್ರಳು ಊರುಬೈಲು ವಾಸುದೇವ ನವರನ್ನು ಲಗ್ನವಾಗಿದ್ದು 2 ವರ್ಷದ ಮಗನಿರುತ್ತಾನೆ.

ಪುತ್ರರಾದ ಗೋವಿಂದರಾಜು (ಸುಗು) BSc computer ಮಾಡಿ ಡಾಜರ್ ಇಂಡಿಯಾದಲ್ಲಿ ಕೆಲಸದಲ್ಲಿದ್ದು, ದ್ವಿತೀಯ ಪುತ್ರ ಸತೀಶ್ ರಿಲೆಯನ್ಸ್ ಕಂಪೆನಿ, ಮುಂಬೈನಲ್ಲಿ, Net Work Engenier ಆಗಿದ್ದಾರೆ.

ಶ್ರೀಯುತ ಶಿರಗಜೆ ಚಿಣ್ಣಪ್ಪನವರು ಸಂಗಾತಿ ಪತ್ರಿಕೆಯನ್ನು ಆದಿಯಿಂದಲೂ ತರಿಸಿಕೊಂಡು ಜೀವಾವಧಿ ಸದಸ್ಯರಾಗಿ ಪತ್ರಿಕಾಭಿವೃದ್ಧಿಗೂ ಜನಾಂಗದ ಅಭಿವೃದ್ಧಿಗೂ ಬಾಜನರಾಗಿದ್ದಾರೆ.

- ಸಂಗಾತಿ.

# "Poli" - ಪುಸ್ತಕದ ಬಗ್ಗೆ ವಿಮರ್ಶೆ ಮತ್ತು ಆಕ್ಷೇಪಣೆ

**"Poli"- Commemorative volume for canara 200.**

ಈ ಪುಸ್ತಕವು ದಕ್ಷಿಣ ಕನ್ನಡ ಜಿಲ್ಲೆ ಸ್ಥಾಪಿತವಾಗಿ 200 ವರ್ಷ ಪೂರೈಸಿದ ಸಂದರ್ಭದಲ್ಲಿ ತಂದಂತಹ ಸ್ಮರಣಾತ್ಮಕ ಸಂಚಿಕೆ. ಇದರ ಮುಖ ಬೆಲೆ - ರೂ500/-, ಪುಟಗಳು - 600

Publishers - The chief Editor - Sri Mukunda Prabhu.
C/o Deputy Commissioner
Dakshina Kannada District
Mangalore - 575 001

ಇದರಲ್ಲಿ ಕರ್ತವ್ಯಲೋಪದಿಂದಾಗಿ ಪುಸ್ತಕದಲ್ಲಿಬಿಟ್ಟು ಹೋದ ಮಾಹಿತಿಯ ಬಗ್ಗೆ ಧ್ವನಿ ಎತ್ತಿ ಡೆಪ್ಯುಟಿ ಕಮೀಶನರ್‌ಗೆ ಶ್ರೀ ಅನಂತರಾಜು ಗೌಡ, ಮಾಜಿ ಉಪಾಧ್ಯಕ್ಷರು, ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಸಮಾಜ" ಬೆಂಗಳೂರು, ಹಾಲಿ ನೆಲ್ಯಾಡಿ ನಿವಾಸಿ ಇವರು ದ. ಕ. ಜಿಲ್ಲೆ, ಜಿಲ್ಲಾಧಿಕಾರಿಯವರಿಗೆ ಬರೆದ ಪತ್ರದ ಸಾರಾಂಶವನ್ನು ಗೌಡ ಬಾಂಧವರ ಅವಗಾಹನೆಗೆ ಮತ್ತುಆ ಪ್ರಯುಕ್ತ ಕೂಡಲೆ ಗೌಡ ಜನಾಂಗದ ಸಂಘ ಸಂಸ್ಥೆಗಳು, ಸಮಾಜಗಳು ಗಣ್ಯ ವ್ಯಕ್ತಿಗಳು, ಹಿತೈಷಿಗಳು ಮತ್ತು ಸಮಾಜದ ಹಿರಿಯ ನಾಗರೀಕರು ಕಾರ್ಯ ಪ್ರವೃತ್ತರಾಗ ಬೇಕೆಂಬುದೆ ಸಂಗಾತಿಯ ಆಶಯವಾದ್ದರಿಂದ ಪ್ರಕಟಿಸುತ್ತಿದ್ದೇವೆ.

-ಸಂಪಾದಕಿ

---

## *ಪತ್ರದ ಸಾರಾಂಶ :*

ನಾನು ನಿಮ್ಮ "Poli....." ಪುಸ್ತಕವನ್ನು ಅತ್ಯಾಸಕ್ತಿಯಿಂದ ಓದಿದ್ದೇನೆ. ಇದು ನಿಮ್ಮ ದೈತ್ಯಶ್ರಮದ ಪ್ರತೀಕ ಎನ್ನಬಹುದು. ಇದರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ, ಆಡಳಿತ ಪದ್ಧತಿಯ ಮೌಲೀಕರಣ, ಅಲ್ಲಿನ ಜನ, ಅವರ ಪದ್ಧತಿ, ಸಂಸ್ಕೃತಿ, ಭಾಷೆ, ಸಾಹಿತ್ಯ ಮುಂತಾದವುಗಳನ್ನು ಒಳಗೊಂಡಿರುವುದು ಸರಿಯಷ್ಟೆ.

## *ನನ್ನ ಪರಿಚಯ :*

ನನ್ನ ಬಾಲ್ಯವನ್ನು ದ. ಕ. ದಲ್ಲಿ ಕಳೆದರು ಉಳಿದೆಲ್ಲಾ ಜೀವನವನ್ನು ಓದು ಮತ್ತು ವೃತ್ತಿಗೋಸ್ಕರ ಹೊರಗಡೆ ಕಳೆದು, ಈಗ 56 ನೇ ವಯಸ್ಸಿನಲ್ಲಿ ಪುನಃ ವ್ಯಾಪಾರ ವೃತ್ತಿಗೋಸ್ಕರ ಪುನಃ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿಯಲ್ಲಿ ನೆಲೆಸಿದ್ದೇನೆ."

ವೃತ್ತಿಯಲ್ಲಿ ಇಂಜಿನಿಯರ್ ಆಗಿರುವ ನಾನು, ಇತಿಹಾಸ, ಭೌಗೋಳಿಕ, ಜನ ಮತ್ತು ಸಂಸ್ಕೃತಿ ಇವುಗಳ ಅಧ್ಯಯನದಲ್ಲಿ ನಾನು ಆಸಕ್ತಿ ಉಳ್ಳವನಾಗಿದ್ದು, ನಿಮ್ಮ "Poli" ಪುಸ್ತಕವನ್ನು ಜ್ಞಾನ ಭಂಡಾರವನ್ನು ಹೆಚ್ಚಿಸಿದೆ.

ಈ ನಿಮ್ಮ ಕೆಲಸದಲ್ಲಿ ಸಣ್ಣ ತಪ್ಪಿನಿಂದಲೂ, ಕೈ ಜಾರುವಿಕೆಯಿಂದಲೊ, ಕರ್ತವ್ಯ ಲೋಪದಿಂದಲೋ ಕೆಲವೊಂದು ವಿಷಯಗಳು ಬಿಟ್ಟು ಹೋಗಿವೆ. ಅದನ್ನು ಕೆಳಗೆ ನೀಡಿರುತ್ತೇನೆ. ಇದು ನಿಮ್ಮ ಮುಂದಿನ ಮುದ್ರಣದಲ್ಲಿ ಉತ್ತಮ ಪಡಿಸಿಕೊಳ್ಳಲು ಸಾಧ್ಯವಾಗುವುದು ಎಂದು ಭಾವಿಸಿರುವೆ.

ಮೊದಲನೆಯದಾಗಿ ಗಡಿನಾಡಿನಲ್ಲಿರುವ ಜನರ ಬಗ್ಗೆ ಹೆಚ್ಚು ಆಸಕ್ತಿ ತೋರಿ, ಪೂರ್ವಪ್ರಾಂತ್ಯದಲ್ಲಿರುವ ಅಂದರೆ ಪುತ್ತೂರು, ಸುಳ್ಯ, ಬೆಳ್ತಂಗಡಿ, ವಿಟ್ಲ ಹಾಗು ಕಾರ್ಕಳ, ಈ ಸ್ಥಳಗಳ ಬಗ್ಗೆ ಮಾಹಿತಿ ಬಹಳ ಕಡಿಮೆ ನೀಡಿರುವುದು ವಿಷಾದಕರ.

ದಕ್ಷಿಣ ಕನ್ನಡ ಜಿಲ್ಲೆಯ ಪಾಣೆ ಮಂಗಳೂರಿನ ನೇತ್ರಾವತಿ ನದಿಯ ಪೂರ್ವದಿಂದ ಬಹಳಷ್ಟು ಬೆಟ್ಟ ಕಾಡುಗಳಿಂದ ಪಸರಿಸಿರುವ ಬೆಳ್ಳಾರೆ ಸುಬ್ರಮಣ್ಯ ಧರ್ಮಸ್ಥಳ, ಬಂಗಾಡಿ, ಪುತ್ತೂರು, ವಿಟ್ಲ, ಸುಳ್ಯ ಹೀಗೆ ಇಲ್ಲೆಲ್ಲಾ ಆವರಿಸಿರುವ ಈ ಜಾಗವನ್ನು ಕೊರಗರು ಸುಮಾರಾಗಿ ಕ್ರಿ. ಶ. 1400 ರಲ್ಲಿ ಆಳಿದರು. ಇಂದು ಅವರು ಪರಿಶಿಷ್ಟ ಜಾತಿಗೆ ಸೇರಿರುತ್ತಾರೆ. ಬಹಳಷ್ಟು ಜನರು ಜೈನ್ಯ ಧರ್ಮಕ್ಕೆ ಅವರ ನಾಯಕರ ಒತ್ತಾಯಕ್ಕೆ ಮತಾಂತರ ಹೊಂದಿರುತ್ತಾರೆ.

"ದ. ಕ. ದ ಕೊರಗರಿಗೂ ಕೊಡಗಿನ -ಕೊಡಗರಿಗೂ ಏನಾದರೂ ಸಾಮ್ಯವಿದೆಯೆ?" ಇದರ ಬಗ್ಗೆ ಅಧ್ಯಯನ ನಡೆಯಬೇಕು.

ಕೊರಗರು ವ್ಯವಸಾಯದಲ್ಲಿ ಪರಿಣಿತರಲ್ಲ. ಅವರು ಸಾಮಾನ್ಯವಾಗಿ ಅರಣ್ಯೋತ್ಪನ್ನವಾದ ಜೇನು, ಹಣ್ಣು, ಇತ್ಯಾದಿಗಳನ್ನು ಅವಲಂಬಿಸಿರುವರು. ಬೇಟೆಯಲ್ಲಿ ಆಸಕ್ತಿಯುಳ್ಳವರಾಗಿದ್ದಾರೆ. ಅವರು ನಾಟಿ ವೈದ್ಯ ಪದ್ಧತಿ ಚಿಕಿತ್ಸೆಯಲ್ಲಿ ಪರಿಣಿತರು. ಮೇಲ್ವರ್ಗದ ಮಕ್ಕಳಿಗೇನಾದರು ಖಾಯಿಲೆ ಬಂದಾಗ ಅವರು ಕೊರಗ ಜನಾಂಗದವರ ಮನೆಯಲ್ಲಿ ಬಿಡುತ್ತಿದ್ದರು.ಕೊರಗ ಮಹಿಳೆ ಮಗುಗೆ ಸ್ತನಪಾನ ಮಾಡಿಸಿ, ಚಿಕಿತ್ಸೆ ನೀಡಿ ಗುಣಮುಖವಾದ ನಂತರ ಕಳುಹಿಸಿಕೊಡುತ್ತಿದ್ದರು. ಆ ಮಗುಗೆ 'ಕೊರಗಪ್ಪ' ಎಂದು ಹೆಸರಿಸುತ್ತಿದ್ದರು. ಇದು ರೂಢಿಯಲ್ಲಿತ್ತು. ಹಾಗೆಯೆ ಮೇರರು, ಅಜಲರು, ಪರವರು ಪಂಬವರು ಮುಂತಾದದವರ ಬಗ್ಗೆ, ಅವರ ಪ್ರತ್ಯೇಕ ಸಂಸ್ಕೃತಿ, ಸಾಮಾಜಿಕ ಜೀವನ, ಸಂಗೀತ, ನೃತ್ಯ, ಭೂತ ರಾಧನೆ ಬಗ್ಗೆ ಯಾವುದೇ ಮಾಹಿತಿ ಇರುವುದಿಲ್ಲ. ವಲಸೆ ಬಂದ ಜನರ ವರ್ಗ ಘರ್ಷಣೆ ಇಲ್ಲದಿರುವಿಕೆಗೆ ಈ ಭೂತರಾಧನೆ ವೇದ ಸಂಸ್ಕೃತಿಗೆ ಸೌಮ್ಯವಿರುವುದು ಕಾರಣ ಎನ್ನಬಹುದೆ?

ಹಾಗೆಯೇ, 'Poli' ಪುಸ್ತಕದಲ್ಲಿ ಗೌಡ ಜನಾಂಗದ ಬಗ್ಗೆ ಏನೇನು ಮಾಹಿತಿ ನೀಡಿರುವುದಿಲ್ಲ. ಇವರು ದ. ಕ. ಜಿಲ್ಲೆಯ ಪೂರ್ವ ದಿಕ್ಕಿನಲ್ಲಿ ನೆಲೆಸಿದ್ದು, ಇದು 1834ರ ವರೆಗೆ ಕೊಡಗಿನ ಒಂದು ಭಾಗವಾಗಿತ್ತು. ಈ ಜಾಗವು, ಉತ್ತರದಲ್ಲಿ ಪಾಣೆ ಮಂಗಳೂರಿನವರೆಗೆಯೂ, ಪಶ್ಚಿಮದಲ್ಲಿ ನೇತ್ರಾವತಿ ನದಿಯ ತನಕವೂ, ದಕ್ಷಿಣದಲ್ಲಿ ಪಯಸ್ವಿನಿ ನದಿಯೂ ಇದ್ದು ಫಲವತ್ತತೆಯಿಂದ ಕೂಡಿದೆ. ಇವರ ಮಾತೃಭಾಷೆ "ಅರೆಗನ್ನಡ". ಇವರು ಸುಳ್ಯ, ಪುತ್ತೂರು, ಬೆಳ್ತಂಗಡಿ ತಾಲೂಕು, ಬಂಟ್ವಾಳ

ತಾಲೂಕಿನ ಅರ್ಧಭಾಗದಲ್ಲಿ ನೆಲೆಸಿರುತ್ತಾರೆ. ಇವರು ಸಾಮಾನ್ಯವಾಗಿ ತುಳು ಮತ್ತು ಅರೆಗನ್ನಡ ಮಾತನಾಡುತ್ತಾರೆ. ಸಾಮಾಜಿಕವಾಗಿ, ರಾಜಕೀಯವಾಗಿ ಆರ್ಥಿಕವಾಗಿ ಇಲ್ಲೇ ನೆಲೆಸಿರುತ್ತಾರೆ. ಇವರು ಕೊಡಗಿನಲ್ಲೂ ನೆಲೆಸಿರುತ್ತಾರೆ. ಪ್ರಮುಖವಾಗಿ ಮಡಿಕೇರಿಯ ಮತ್ತು ಸೋಮವಾರಪೇಟೆ ತಾಲೂಕಿನಲ್ಲಿ ಹೆಚ್ಚು ಇರುತ್ತಾರೆ. ಶಾಂತಿಯುತ ಸಮಯದಲ್ಲಿ ವ್ಯವಸಾಯದಲ್ಲಿ ತೊಡಗುವ ಇವರು ಯುದ್ಧ ಕಾಲದಲ್ಲಿ ಸೈನಿಕರಾಗಿ ಹೋಗಿರುತ್ತಾರೆ. ವಿಜಯನಗರ ಸಾಮ್ರಾಜ್ಯ ಪತನವಾದ ನಂತರ, ಅವರು ಮುಸ್ಲಿಂ ಮತಕ್ಕೆ ಲಿಂಗಾಯಿತ ಧರ್ಮಕ್ಕೆ ಧರ್ಮಾಂತರವಾಗಿ ಬಿಡುವೆವೇನೊ ಎಂಬ ಭಯದಲ್ಲಿದ್ದವರು. ಕಿ. ಶ. 1600 ಸಮಯದಲ್ಲಿ ಈ ಗೌಡರು (ಹತ್ತು ಕುಟುಂಬ, ಹದಿನೆಂಟು ಗೋತ್ರ)ದವರು ದ. ಕ. ಜಿಲ್ಲೆಯ ಪೂರ್ವತ್ಯದಲ್ಲೂ, ಕೊಡಗಿನ ಮೊದಲ ಭಾಗದಲ್ಲಿ ನೆಲೆಸಿರುತ್ತಾರೆ. ವಿಜಯನಗರ ಪತನವಾದ ನಂತರ ಇಕ್ಕೇರಿ ನಾಯಕರು ರಾಜ್ಯವಾಳಿದ್ದು, ಕ್ರಿ. ಶ. 1700 ದಲ್ಲಿ ಇಕ್ಕೇರಿ ಸಂಸ್ಥಾನದ ದೊರೆ ಸೋಮಶೇಖರ ಕೊಡಗಿನ ದೊಡ್ಡ ವೀರರಾಜೇಂದ್ರನಿಗೆ ಸುಳ್ಯ ಮತ್ತು ಅಮರ ಮಾಗಣೆಯನ್ನು ಉಡುಗೊರೆಯಾಗಿ ನೀಡಿದನು.ಇವರಿಬ್ಬರು ಲಿಂಗಾಯಿತ ರಾಗಿದ್ದರು.

1785 ರಲ್ಲಿ ಟಿಪ್ಪು ಸುಲ್ತಾನ ಕೊಡಗಿಗೆ ದಂಡೆತ್ತಿ ಬಂದು 85,000 ಕೊಡಗರನ್ನು ಮತ್ತು ದೊಡ್ಡ ವೀರರಾಜೇಂದ್ರರನ್ನು ಶ್ರೀರಂಗ ಪಟ್ಟಣಕ್ಕೆ ಖೈದಿಗಳನ್ನಾಗಿ ಒಯ್ದು ಮುಸ್ಲಿಂಧರ್ಮಕ್ಕೆ ಮತಾಂತರಿಸಿದನು. 1788 ಡಿಸೆಂಬರ್‌ನಲ್ಲಿ ದೊ. ವಿ. ರಾಜೇಂದ್ರ ಪಿರಿಯಾಪಟ್ಟಣ ಜೈಲಿನಿಂದ ಪರಾರಿಯಾಗಿ ಕೊಡಗಿಗೆ ಬಂದು ಉಳಿದ ಕೊಡಗರನ್ನು ಸೇರಿಸಿ 1792 ರಲ್ಲಿ ಬ್ರಿಟಿಷರ ಮಧ್ಯಂತರದಲ್ಲಿ ಅಮರ ಸುಳ್ಯವನ್ನು ಪುತ್ತೂರಿವರೆಗೆ ವಿಸ್ತರಿಸಿದನು. ಮತ್ತು ಅಲ್ಲಿದ್ದ ವ್ಯವಸಾಯ ಮತ್ತು ದನ ಸಾಕಣೆಯಲ್ಲಿ ಪರಿಣಿತರಾದ ಗೌಡರನ್ನು ಕೊಡಗಿಗೆ ಬರುವಂತೆ ಮಾಡಿ, ಅವರಿಗೆ ವ್ಯವಸಾಯ ಮಾಡಲು ಜಾಗವನ್ನು ಜಮ್ಮ/ ಉಂಬಳಿ'ಯಾಗಿ ನೀಡಿದನು.

ಅಮರ ಸುಳ್ಯ ಮತ್ತು ಪುತ್ತೂರು ಮದ್ರಾಸು ಪ್ರೆಸಿಡೆನ್ಸಿಯ ಕೆಳಗೆ ದ. ಕನ್ನಡದ ಭಾಗವಾಗಿ ಕೊಡಗಿನಿಂದ ಪುನಃ ಬೇರೆಯಾಯಿತು.

"ಗೌಡರು ಅಮರ ಸುಳ್ಯ ದಂಗೆ- ಕಲ್ಯಾಣ ಸ್ವಾಮಿಯು ನೇತೃತ್ವದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಚಿಕ್ಕ ವೀರ ರಾಜೇಂದ್ರನ ಕೊಡಗು ಬೇರೆಯಾದಾಗ ರೈತರು ಬ್ರಿಟಿಷ್ ಸರ್ಕಾರಕ್ಕೆ ಕಂದಾಯ ಕಟ್ಟಬೇಕಾಗಿತ್ತು. ಕ್ರೈಸ್ತ ಧರ್ಮಕ್ಕೆ ಮತಾಂತರದ ಭಯ ಹೊಂದಿದ್ದರು. ಶ್ರೀಮಂತ ಹಾಗೂ ಪ್ರಬಲ ಜನರು ರಾಜ ಚಿಕ್ಕ ವೀರ ರಾಜೇಂದ್ರನೊಡನೆ ಇದ್ದರು. ಅವರೆಂದರೆ ಕೊಡಗಿನಿಂದ ಹುಲಿಕೊಂದ ನಂಜಯ್ಯ, ಚೆಟ್ಟಿಕುಡಿಯ ಕರ್ತುಕುಡಿಯ, ಗುಡ್ಡೇ ರ ಅಪ್ಪಯ್ಯ ಗೌಡ, ಸೋಮಯ್ಯ, ಮಾಚಯ್ಯ, ಇವರಾದರೆ ಕೆದಂಬಾಡಿ ರಾಮೇಗೌಡ, ಅಡ್ಕರ್ ಅಣ್ಣೇಗೌಡ, ಇತರರು ಸುಳ್ಯದಿಂದಲೂ, ಹಾಗೂ ಕುಕ್ಕುನೂರು ಚೆನ್ನಯ್ಯಗೌಡ, ಪುಟ್ಟ ಬಸವರಾಜ (ನಂತರ ಕಲ್ಯಾಣ ಸ್ವಾಮಿ ಎಂದು ಪ್ರಖ್ಯಾತನಾದನು) ಬೆಳ್ಳಾರೆ ಯಿಂದೂಲೂ ಬಂದು ಬ್ರಿಟಿಷರ ವಿರುದ್ಧ ಹೋರಾಡಿದರು.

ನಂದವರ ಮತ್ತು ಬಂಗರಸ, ಇವರಿಬ್ಬರು ಕಲ್ಯಾಣ ಸ್ವಾಮಿಯ ಸೈನ್ಯವನ್ನು ಬೆಂಬಲಿಸಿದರು. ಆ ಸೈನ್ಯದಲ್ಲಿ ಕೆದಂಬಾಡಿ ರಾಮೇಗೌಡ, ಅಡ್ಕರ್ ಅಣ್ಣೇಗೌಡ ಇನ್ನಿತರರ ನೇತೃತ್ವದಲ್ಲಿ ತಲಾ 1000 ಸೈನಿಕರಿದ್ದರು. ಕಲ್ಯಾಣ ಸ್ವಾಮಿ ದ. ಕ. ವನ್ನು ಮಾರ್ಚಿ/ಏಪ್ರಿಲ್ 1837 ರಲ್ಲಿ ಮಂಗಳೂರನ್ನು 13 ದಿನ ಆಳಿದ್ದರು.

ಪರಿಣಾಮವಾಗಿ ಕಲ್ಯಾಣಸ್ವಾಮಿ, ರಾಮೇಗೌಡ, ಅಣ್ಣೇಗೌಡ ಅವರನ್ನು ಬಿಕ್ರನ ಕಟ್ಟೆಯಲ್ಲಿ ನೇಣು ಹಾಕಲಾಯಿತು. ಗುಡ್ಡೆಮನೆ ಅಪ್ಪಯ್ಯರನ್ನು ಮಡಿಕೇರಿ ಕೋಟೆಯಲ್ಲಿ ನೇಣುಹಾಕಲಾಯಿತು.

**"Newyark Daily Tribuna'** ಗೆ 1857 ರಲ್ಲಿ ಕಾರ್ಲ್‌ಮಾರ್ಕ್ಸ್ ದಂಗೆಯ ಬಗ್ಗೆ ಇದು ಬ್ರಿಟಿಷ್ ಸಾಮ್ರಾಜ್ಯದ ಪತನದ ಪ್ರಾರಂಭ" ಎಂದು ಬರೆದಿದ್ದನು. ಇದನ್ನು "ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಎಂದು ಕರೆಯಲಾಯಿತು. (ವಿವರಕ್ಕಾಗಿ 1837 ರ ಸ್ವಾತಂತ್ರ್ಯ ಸಂಗ್ರಾಮ"- ಪೂಜಾರಿರ ಮೊಣ್ಣಪ್ಪ)

1837 ರ ದಂಗೆಯ ನಂತರ ಬ್ರಿಟಿಷರು ಗೌಡರನ್ನು ಅನಕ್ಷರಸ್ತರು, ಇವರು ಬ್ರಿಟಿಷರೊಡನೆ ವ್ಯವಹರಿಸಲು ಅಸಮರ್ಥರು ಎಂದು ತಿಳಿದು, ಬೇರೆಯವರನ್ನು ಕಂದಾಯ ವಸೂಲಿಗಾಗಿ ಮಧ್ಯವರ್ತಿಗಳನ್ನಾಗಿಯೂ ವ್ಯಾಪಾರಿಗಳ ನ್ನಾಗಿಯೂ, ಲೇವಾ ದೇವಿಗಾರರನ್ನಾಗಿಯೂ, ನೇಮಿಸಿ ಕೊಂಡರು. ಉಳಿದ ಶ್ರೀಮಂತ ಜಮೀನ್ದಾರ ಗೌಡರು (ಅನಕ್ಷರಸ್ಥರು) ಅವರ ಜಾಗಕ್ಕೆ ಅವರೇ ಹಿಡುವಳಿದಾರರಾದರು. ಹೊಸದಾಗಿ ನಿರ್ಮಿತವಾದ ಗುಂಪು, ಬ್ರಾಹ್ಮಣರು, ಭಂಟರು, ಕೊಂಕಣಿಗಳು ವ್ಯಾಪಾರಿಗಳಾದರು. ಅವರನ್ನು ಕಂಪೆನಿಯು ಸರ್ಕಾರದ ಮಧ್ಯವರ್ತಿಗಳಾಗಿ ನೇಮಿಸಿಕೊಂಡರು.

Implementation of Tanancy Act ಕೆಳವರ್ಗದ ಗೌಡರಿಗೆ ಅನುಕೂಲವಾಯಿತು. 20 ನೇ ಶತಮಾನದ ಎರಡನೇ ಭಾಗದಲ್ಲಿ ಗೌಡರು ವಿದ್ಯಾಭ್ಯಾಸದ ಕಡೆಗೆ ತುಂಬಾ ಆಸಕ್ತಿ ತೋರಿಸಲಾರಂಭಿಸಿದರು. ಇವರಲ್ಲಿ ಸುಮಾರು ಜನರು ಸರ್ಕಾರಿ ಉದ್ಯೋಗಿಗಳು, ಆಡಳಿತ ರೂಢಿಗಳು, ವೈದ್ಯರು ಲೇಖಕ / ಲೇಖಕಿಯರು ಇಂಜಿನಿಯರ್‌ಗಳು, ಸೈನ್ಯ, ಪೊಲೀಸು ಇಲಾಖೆ ಗಳಲ್ಲಿ ಕೆಲಸ ಹೊಂದಿರುತ್ತಾರೆ.

*ಉದಾ:-* ಡಾ|| ಚಿನ್ನಪ್ಪ ಗೌಡ, ಡಾ|| ಪುರುಷೋತ್ತಮ ಬಿಳಿಮಲೆ, ಸುಳ್ಯದ ಶ್ರೀ ಕುರುಂಜಿ ವೆಂಕಟರಮಣಗೌಡ, ಶ್ರೀ ಸದಾನಂದ ಗೌಡ, ದಂಬೆಕೋಡಿ ಚಿಣ್ಣಪ್ಪ, (ಮಾಜಿ ಮಂತ್ರಿ); ದಂಬೆಕೋಡಿ ಮಾದಪ್ಪ (ಮಾಜಿ M.L.A) K.R. Chamaya

Rtd. Law Secretary, ಬಿ. ಎ. ಹರೀಶ್‌ಗೌಡ IAS (Managing Director of KIADB) ಕೆ. ಎ. ಬೆಳ್ಳಪ್ಪ IAS Retd. ರಾಜ್ ಚೆಂಗಪ್ಪ Executive Editor, INDIA TODAY, ಎಂ, ಬಿ, Jayarama to Chief minister, Sampaje Deviprasad and many others.

ಗೌಡರು ಸಾಮಾನ್ಯವಾಗಿ ಅಂತರ್ಮುಖಿಗಳು, ಸಂಪ್ರದಾಯವಾದಿಗಳು. ಯಾವುದೇ ಅಪಾಯ ಕೆಲಸ ತೆಗೆದುಕೊಳ್ಳಲು ತಯಾರಿರುವುದಿಲ್ಲ. ಅವರದು ಸಾಮಾನ್ಯವಾಗಿ ಪ್ರಾಚೀನ ವ್ಯವಸಾಯ ಪದ್ಧತಿ, ನಂತರ ಟ್ರೇಡರ್ಸ್ ವಕೀಲರು, ಅಥವಾ ಯಾವುದೆ ಸರ್ಕಾರದ ಸುರಕ್ಷಿತ ಕೆಲಸ ಹಾಗೂ ಇನ್ನೀತರ ಪ್ರಾಥ್‌ಮಿಕ ಕೆಲಸಗಳನ್ನು ಮಾಡುತ್ತಾರೆ. ಸ್ವಯಂ ಉದ್ಯೋಗಿಗಳಾಗಲು, ವ್ಯವಹಾರ ಮಾಡಲು ತಯಾರಿರುವುದಿಲ್ಲ. ತುಂಡು- ತುಂಡಾದ ಪ್ರಾಚೀನ ವ್ಯವಸಾಯ ಭೂಮಿಯಿಂದ ಅವರು ಬಡವರಾಗಿದ್ದಾರೆ. ಇತ್ತೀಚೆಗೆ ಆ ಲೋಕದಿಂದ ಹೊರಬಂದು ಅಕ್ಷರಸ್ಥರಾಗುತ್ತಾ ಮುಂದುವರಿಯುತ್ತಿದ್ದಾರೆ.

ಈ ಮೇಲಿನ ಸತ್ಯ ಸಂಗತಿಗಳು ನಿಮಗೆ ಮತ್ತು ನಿಮ್ಮ ಮುಂದಿನ ಮುದ್ರಣಕ್ಕೆ ಸಹಕಾರಿಯಾಗುವುದು ಎಂದು ನಾನು ಭಾವಿಸಿರುವೆ.

ಧನ್ಯವಾದಗಳು.

-ಪಿ. ಅನಂತರಾಜ ಗೌಡ.

ಶ್ರೀಯುತ ಅನಂತರಾಜು ಗೌಡ ಅವರು "ಸಂಗಾತಿ" ಪತ್ರಿಕೆಗೆ ಬರೆದ ಪತ್ರದಲ್ಲಿ ಗೌಡ ಕುಲ ಬಾಂಧವರ ಏಳಿಗೆಗಾಗಿ ಹಲವಾರು ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಈ ಪತ್ರವನ್ನು ನಾವು ಸಂಗಾತಿಯಲ್ಲಿ ಪ್ರಕಟಿಸುತ್ತಿದ್ದೇವೆ.

ಇದರ ಬಗ್ಗೆ ನಮ್ಮ ಜನಾಂಗದ ವಿಚಾರವಂತರು ಚಿಂತನಶೀಲರು, ತೀವ್ರವಾಗಿ ಚಿಂತಿಸಿ, ಮಂಥನ ಮಾಡಿ ತಕ್ಕ ಪ್ರತಿಕ್ರಿಯೆ ನೀಡಬೇಕು ಎಂಬುದು ಸಂಗಾತಿಯ ಆಶಯ....

## ಮುಖ್ಯಾಂಶಗಳು

1. ಪಾರ್ಲಿಮೆಂಟು ಸದಸ್ಯರು ಯಾವಾಗಲೂ ಗಡಿನಾಡಿನಿಂದ ಬಂದವರಾಗಿರಬೇಕು. ಆದ್ದರಿಂದ ನಮ್ಮಲ್ಲಿ ಒಬ್ಬರನ್ನು ಮುಂದಿನ ಚುನಾವಣೆಗೆ ನಿಲ್ಲಿಸಿದರೆ ನಮ್ಮ ಜನಾಂಗ ರಾಜಕೀಯವಾಗಿ ಏಳಿಗೆ ಹೊಂದಬಹುದು.

2. ಮನುಷ್ಯನ ಚಲನೆಯಿಂದಾಗಿ ಶತಮಾನ ಕಳೆದ ಹಾಗೆ ಎಲ್ಲ ರೀತಿಯ ಅಭಿವೃದ್ಧಿ ಸಾಧ್ಯವಾಯಿತು. ಇದರಿಂದಾಗಿ ಇನ್ನೊಂದು ಜನಾಂಗದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆ ನೋಡಲು ಸಾಧ್ಯ! ಹಾಗೆಯೇ ಸಾರಿಗೆಯಲ್ಲಿನ ಅಪ್ರಾಮಾಣಿಕತೆ, ಭ್ರಷ್ಟಾಚಾರ ನೋಡಲು ಸಾಧ್ಯವಾಯಿತು. ಖಾಸಗಿ ಸಾರಿಗೆ ವ್ಯವಸ್ಥೆ ಪ್ರಾಮಾಣಿಕ ವಾಗಿರುವಾಗ ನಾವು ಗಡಿನಾಡಿಗೆ ಅಂದರೆ ದ. ಕ. ಕೊಡಗು, ಹಾಸನ, ಚಿಕ್ಕಮಂಗಳೂರು ಹೀಗೆ ಏಕೆ ಸ್ಥಳೀಯ ಜಿಲ್ಲೆಯೊಳಗಿನ ಖಾಸಗಿ ಸಾರಿಗೆ ಕೈಗೆತ್ತಿಕೊಳ್ಳಬಾರದು. ಮಾರುಕಟ್ಟೆಯ ಸ್ಥಿತಿ ಗನುಗುಣವಾಗಿ ಈ ಸಂದರ್ಭವನ್ನು ಬಳಸಿಕೊಂಡರಾಯಿತು.

3. ಕೊಡಗು, ಸುಳ್ಯ, ಪುತ್ತೂರು, ಬೆಳ್ತಂಗಡಿ ಮತ್ತು ವಿಟ್ಲದಲ್ಲಿರುವ ಜನರನೆಲ್ಲಾ ಒಟ್ಟು ಗೂಡಿಸಿದರೆ, ಸಾಮಾಜಿಕ, ಆರ್ಥಿಕ ರಾಜಕೀಯ ಬೆಳವಣಿಗೆ ಸಾಧ್ಯ. ಈ ಜಾಗದ ಜನರನ್ನೆಲ್ಲಾ ಒಟ್ಟುಗೂಡಿಸಿದರೆ, ಉತ್ತೇಜನ ಕೊಟ್ಟಂತಾಗುತ್ತದೆ. ಮತ್ತು ಆ ಪ್ರದೇಶದ ಇತರ ಗುಂಪಿಗಿಂತ ನಮ್ಮ ಜನಾಂಗದ ಗುಂಪಿಗೆ ಮುಂದಾಳುತನ ದೊರೆಯುತ್ತದೆ.

"ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಸಮಾಜ ಇಂದು B'lore, Mysore, Kodagu, ದ. ಕ. ಎಲ್ಲ ಕಡೆ ಹರಡಿದೆ. ಮತ್ತು ವಕ್ಕಲಿಗರ ಸಂಘದೊಡನೆ ಸಂಯೋಜನೆ ಹೊಂದಿದೆ. ಕೊಡಗು ಗೌಡ ಸಮಾಜ ಈದಿಕ್ಕಿನಲ್ಲಿ ಹೆಜ್ಜೆ ಇಟ್ಟಿದೆ.

5. ಬದಲಾವಣೆಗಳಿಗೆ ಹೊಂದಿಕೊಳ್ಳುತ್ತಾ ಹೋಗಬೇಕು. "ಬದುಕಲಿಕ್ಕಾಗಿ ಬದಲಾವಣೆ" ನಿಸರ್ಗದ ನಿಯಮ, ಪ್ರಾಚೀನ ವ್ಯವಸಾಯ ಪದ್ಧತಿಯನ್ನೇ ನಂಬಿಕೊಂಡು, ವ್ಯವಸಾಯ ಮಾಡುವುದನ್ನು ಬಿಟ್ಟು, ಹೊಸ ಬದಲಾವಣೆಯುಳ್ಳ ಬದುಕಿನಲ್ಲಿ ಜೀವಿಸಬೇಕು. ಇದು ನಮಗೆ ಒಮ್ಮೆಗೆ ಸಾಧ್ಯವಿಲ್ಲದಿದ್ದರೂ ನಮ್ಮ ಮುಂದಿನ ಪೀಳಿಗೆಯನ್ನು ಸರ್ಕಾರಿ ಕೆಲಸಕ್ಕೆ ಕಾಯುತ್ತ ಕೂರುವುದನ್ನು ಬಿಡಿಸಿ, ಸ್ವಯಂ ಉದ್ಯೋಗ ವ್ಯಾಪಾರ-ವಹಿವಾಟು ಬೇರೆ ರೀತಿಯ ಓದು (ವೃತ್ತಿ ಪರ ಓದು) ಅಂದರೆ ಮಾಧ್ಯಮ ನಿರ್ವಹಣೆ, ಪತ್ರಿಕೋದ್ಯಮ, ಕೈಗಾರಿಕೋದ್ಯಮ (ಬೇಗ ಅಭಿವೃದ್ಧಿ ಹೊಂದುವ) ಇತ್ಯಾದಿ ಕೈಗೊಳ್ಳುವಂತೆ ಚಿಂತಿಸಬೇಕು. ರಿಸ್ಕ್ ತೆಗೆದುಕೊಳ್ಳುವುದನ್ನು ಕಲಿಸಬೇಕು.

"ಈ ವ್ಯಾಪಾರಮಯ ಜಗತ್ತಿನೊಳು ಬದುಕಬೇಕು. ಹೊರಗಿನ ಜಗತ್ತಿನತ್ತ ಚಲಿಸಬೇಕು."

7. ಯುವ ಪೀಳಿಗೆ ನಮ್ಮಲ್ಲಿ ಮುಂದುವರಿದ ಹಿರಿಯರಿಂದ ಪ್ರೇರಣೆ ಪಡೆಯಬೇಕು.

*ಉದಾ:* Baddna Raj Chengappa 'INDIA TODAY' ಯ ಕಾರ್ಯನಿರ್ವಾಹಕ ಮಂಡಳಿಯ ನಿರ್ದೇಶಕರು ಆಗಿರುವ ಇವರು 'ಶಾಂತಿಯ ಆಯುಧ' (Weapons of Peace) ಕೃರ್ತ! ಇವರು ಬಿಲ್ ಕ್ಲಿಂಟನ್, Vladmir Putin ಇವರ ಸಂದರ್ಶನದ ಜೊತೆಗೆ ಮಧ್ಯಾಹ್ನದ ಭೋಜನವನ್ನು ಮಾಡಿದ್ದಾರೆ. ಜನರಲ್ ಮುಷರಫ್‌ನೊಡನೆ ಆಫ್‌ಘಾನಿಸ್ತಾನಕ್ಕೆ ಪ್ರಯಾಣವನ್ನು ಕೈಗೊಂಡಿದ್ದಾರೆ.

2. ಕುರುಂಜಿ ವೆಂಕಟರಮಣ ಗೌಡ ಹಲವಾರು ವಿದ್ಯಾಸಂಸ್ಥೆಗಳನ್ನು ಸ್ಥಾಪನೆ ಮಾಡಿದ್ದಾರೆ.

3. ಶ್ರೀ ಅಮ್ಮವನ ಪಿ. ವಾಸು ಪೆಟ್ರೋಲಿಯಂ ಉತ್ಪನ್ನಗಳನ್ನು ಮಾರಾಟ ಮಾಡುವವರಲ್ಲಿ ಕರ್ನಾಟಕದಲ್ಲೆ ಪ್ರಥಮ ಹಾಗೂ ಕಾರ್ಲೆ ಸಹೋದರರು ಸಹ!

15ನೇ ಪುಟಕ್ಕೆ

# ಉಡುಪು

ಮನುಷ್ಯನ ಜೀವನಕ್ಕೆ ಗಾಳಿ, ಬೆಳಕು, ನೀರು, ಆಹಾರ, ಎಷ್ಟು ಮುಖ್ಯವೋ ಅದಕ್ಕಿಂತ ಮುಖ್ಯವಾದದು ಉಡುಪು. ಉಡುಪು ಧರಿಸದ ಮನುಷ್ಯನೇ ಇಲ್ಲ. ಏನೇ ಆದರೂ ಮಾನ, ವನ್ನಾದರೂ ಮುಚ್ಚಿಕೊಳ್ಳಲು ಆದರೂ ಚಿಕ್ಕ ಚಿಕ್ಕ ಉಡುಪು ಮುಖ್ಯ,. ಇವು ತಲ ತಲಾಂತರದಿಂದಲೂ ನಡೆದು ಬಂದ ರೂಢಿ. ಉಡುಪು ಇಲ್ಲದೆ ಮನುಷ್ಯನು ಎಲ್ಲೂ ಓಡಾಡುವಂತಿಲ್ಲ. ಹಾಗೇ ಓಡಾಡಿದರೆ ಜನರ ವ್ಯಂಗ್ಯ ನೋಟ ಮತ್ತು ನಾಚಿಕೆ ಇದರಿಂದ ಕೂಡಿರುವುದು. ಈ ಉಡುಪು ಮನುಷ್ಯನ ಅಂಗಾಂಗಗಳಿಗೆ ತಕ್ಕಂತೆ ಹೊಲಿದು ಅವುಗಳ ರೂಪವನ್ನು ಹೆಚ್ಚಿಸುತ್ತದೆ. ಮನುಷ್ಯ ಚೆನ್ನಾಗಿಲ್ಲದಿದ್ದರು ಪರವಾಗಿಲ್ಲ. ಆದರೆ ಅವರು ಹಾಕುವ ಉಡುಪು ವೈವಿಧ್ಯಮಯವಾಗಿದ್ದರೆ ಮನುಷ್ಯನಿಗೆ ಗೌರವ ಹೆಚ್ಚು ಹಾಗೂ ರೂಪು ಹೆಚ್ಚು. ಉಡುಪುಗಳನ್ನು ನಾನಾ ರೀತಿಯಲ್ಲಿ ತಯಾರಿ ಮಾಡಿ ಜನರ ಮನಸ್ಸನ್ನು ಆಕರ್ಷಿಸುತ್ತದೆ. ಉಡುಪುಗಳನ್ನು ಅವರವರ ವರ್ಣಕ್ಕೆ ಸರಿಯಾದ ವಿನ್ಯಾಸ ಭರಿತವಾಗಿ ಉಡುಪು ಹಾಕಿಕೊಂಡರೆ ಅವನು/ಅವಳು ಜನರ ಕಣ್ಣಿಗೆ ಆಕರ್ಷಿತವಾಗಿ ಅವರ ರೂಪವನ್ನು ಹೆಚ್ಚಿಸುತ್ತದೆ. ಉಡುಪುಗಳನ್ನು ಸಮಯ ಮತ್ತು ಸಂದರ್ಭಕ್ಕೆ ತಕ್ಕಂತೆ ಆರಿಸಿ ಹಾಕಿಕೊಂಡರೆ ಅದಕ್ಕೆ ಸರಿಯಾದ ಗೌರವ ಸಮಾನತೆ ಇರುತ್ತದೆ. ಉಡುಪುಗಳನ್ನು ನಾನಾ ರೀತಿಯಲ್ಲಿ ತಯಾರಿ ಮಾಡಿದ್ದರು, ಸಹ ಅದನ್ನು ಹಾಕುವ ಸಂದರ್ಭವನ್ನು ನಾವು ಗುರುತಿಸಿಕೊಳ್ಳಬೇಕು. ಒಂದು ರೀತಿಯಲ್ಲಿ ಇದು ನಿಯಮವೆಂದು ಹೇಳಬಹುದು. ವಯಸ್ಸಿಗೆ ತಕ್ಕಂತೆ ವಿನ್ಯಾಸಗಳು ಈಗ ನೋಡಿ ಮಕ್ಕಳಿಗೆ ನಾನಾ ರೀತಿಯ ಉಡುಪುಗಳನ್ನು ಹಾಕಿ ಸಂತೋಷ ಪಡುತ್ತೇವೆ. ಗಂಡಿಗೆ ಗಂಡಸರ ಉಡುಪುಗಳನ್ನು, ಹೆಣ್ಣಿಗೆ ಹೆಣ್ಣಿನ ಉಡುಪುಗಳು ವೈವಿಧ್ಯಂಯವಾಗಿದ್ದು, ವಿಶಿಷ್ಠ ರೀತಿಯಲ್ಲಿ ವಿನ್ಯಾಸವಾಗಿ ರೂಪುಗೊಂಡು ಜನರ ಮನಸ್ಸನ್ನು ಆಕರ್ಷಿಸುವುದು. ಆದರೆ ಒಂದು ವಿಶೇಷ ಎಂದರೆ ಗಂಡು ಎಷ್ಟೇ ವಿಶಿಷ್ಟವಾದ ವಿನ್ಯಾಸದ ಉಡುಪುಗಳನ್ನು ಧರಿಸಿದ್ದರೂ ಅದು ಹೆಚ್ಚು ಆಕರ್ಷಣೀಯ ವಾಗಿರುವುದಿಲ್ಲ. ಹೆಣ್ಣು ತನ್ನ ಅಂಗಾಂಗಳನ್ನು ಪ್ರದರ್ಶಿಸಿ ರೂಪು ರೇಖೆಗಳನ್ನು ಜನರ ಕಣ್ಣಿಂದ ಸೆಳೆದು ಅವುಗಳ ಕಲ್ಪನೆಯನ್ನು ಕತ್ತಲಲ್ಲಿ ಸವೆಯುವರು ಹಲವಾರು ಮಂದಿ. ಹೆಣ್ಣಿಗೆ ಎಲ್ಲಾ ರೀತಿಯ ಉಡುಪು, ಪ್ಯಾಂಟು ಶರ್ಟು, ಹಾಕಿದರು. ಚಂದವೇ. ಆದರೆ ಗಂಡು ಯಾಕೆ? ಸೀರೆ ಉಡುವುದಿಲ್ಲ. ಅದೇ ಒಂದು ಪ್ರಶ್ನೆ? ಅದು ಪ್ರಶ್ನೆಯಾಗಿಯೇ ಉಳಿಯುತ್ತದೆ. ಹೆಣ್ಣಿಗೆ ಸ್ವಲ್ಪವಾದರು ಎಲ್ಲಾ ರೀತಿಯಲ್ಲೂ ಸ್ವಾತಂತ್ರ್ಯವಿದೆ ಎಂದು ಹೇಳಬಹುದು. ಯಾಕೆಂದರೆ ಹೆಣ್ಣು ಅರ್ಧರಾತ್ರಿಲ್ಲಿ ಸೀರೆ ಉಟ್ಟು ನಡೆದಳು ಅಂದರೆ ಅವಳ ಹಿಂದೆ ಗಂಡಸರು ಜಮಾಯಿಸುವರು. ಹೆಣ್ಣು ಗಂಡಸಿಗೆ ಸಮಾನಾಗಿ ನಿಲ್ಲುವಳು. ಹೆಣ್ಣು ದೇಶ ಸೇವೆಗೆ ಕೂಡ ಸರಿಸಮಾನಾಗಿ ಎದುರಿಸುವಳು. ಹೆಣ್ಣಿಗೆ ಗಂಡು ಉಡುಪು ಹಾಕಿದರೆ ಧೈರ್ಯದಿಂದ ನಡೆಯಬಲ್ಲರು ಅಲ್ಲವೆ? ಉಡುಪುಗಳಲ್ಲಿ ಹಲವಾರು ರೀತಿಯ ಗೌರವಗಳು ಸಿಕ್ಕುವುದುಂಟು.

***1. ಪಂಚೆ ಶರ್ಟು ಹಾಕಿ ಕೊಂಡರೆ ನಯ, ವಿನಯ, ಪ್ರೀತಿ, ಎಲ್ಲಾರೂ ಒಂದೇ ಎಂಬ ಭಾವನೆ.***

***2. ಪ್ಯಾಂಟು , ಕೋಟು ಹಾಕಿಕೊಂಡರೆ (ಶ್ರೀಮಂತಿಕೆ ಆಡಂಬರ ಮತ್ತು ಶಿಸ್ತು ಹಾಗೂ ದರ್ಪ ಇವುಗಳು.***

***3. ಬಿಳಿ ಡ್ರೆಸ್‌ಗಳನ್ನು ಅಥವಾ ಕದ್ದರ್ ಡ್ರೆಸ್‌ಗಳನ್ನು ಹಾಕಿಕೊಂಡರೆ ಆ ಗುಂಪಿನ ನಾಯಕನೆಂಬ ಭಾವನೆ.***

***4 ಪ್ಯಾಂಟು, ಶರ್ಟು, ಸಪೇ ಸಾಮಾನ್ಯ ವ್ಯಕ್ತಿಯಂತೆ.***

ಹೆಣ್ಣು ಸೀರೆಯಲ್ಲಿ ಕೂಡ ರೇಷ್ಮೆ ಸೀರೆ ಉಟ್ಟರೆ ಸಮಾರಂಭದಲ್ಲಿ ಒಂದು ಗೌರವ, ನೂಲಿನಸೀರೆ ಉಟ್ಟರೆ ಕೀಳಿರಿಮೆಯ ನೋಟ, ಈಗ ಸರಕಾರಿ ನೌಕರರು ಕೂಡ ಒಂದೊಂದು ಸಂಸ್ಥೆಗೆ ಅನುಗುಣವಾಗಿ ಒಂದೊಂದು ನೀತಿನಿಯಮಗಳ ಸಂಕೇತವಾಗಿ ಅವರಿಗೆ ತಕ್ಕ ಉಡುಪುಗಳನ್ನು ತಯಾರಿಸಿ,ಸರಕಾರವು ಅವರಿಗೆ ಒದಗಿಸಿ ಕೊಡುತ್ತದೆ. ದೇಶದ ರಕ್ಷಣೆಗೆಂದು ಖಾಕಿ ಬಟ್ಟೆಯನ್ನೂ ಶಾಂತಿ ಪಾಲನೆಗೆಂದು ಬಿಳಿ ಬಟ್ಟೆಯನ್ನು ಒದಗಿಸಿ ಕೊಡುತ್ತಾರೆ. ಹೀಗೆ ನೂರಾರು ರೀತಿಯಲ್ಲಿ ಉಡುಪಿನ ಸೌಲಭ್ಯವನ್ನು ಸರಕಾರದವರು ಒದಗಿಸಿ ದೇಶದ ಶಾಂತಿಯನ್ನು ಕಾಪಾಡುತ್ತಾರೆ. ಈಗ ಉಡುಪುಗಳ ವಿನ್ಯಾಸ ಕಾಲ, ಕಾಲ ಬದಲಾದಂತೆಲ್ಲಾ ಉಡುಪುಗಳ ಬದಲಾವಣೆಯು ಹೆಚ್ಚುತ್ತದೆ.

ಸಾಮಾನ್ಯವಾಗಿ ನಮ್ಮ ದೇಶದಲ್ಲಿ ಉಡುಪುಗಳಿಗೆ ಇರುವ ಪ್ರಾತಿನಿಧ್ಯ ಪರದೇಶಗಳಲ್ಲಿ ಇರುವುದಿಲ್ಲ. ಒಂದು ಸೀರೆಯ ಉಡುಪಿನಲ್ಲಿಯೇ ಭಾರತೀಯ ನಾರಿಯನ್ನು ಕಂಡುಕೊಳ್ಳ ಬಹುದು. ಅದು ಸೀರೆಗೆ ಸಿಕ್ಕುವ ಗೌರವ ಅಲ್ಲವೆ?

ಲೇಖಿನ: ಆಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ.

---

ಹಿಂದಿನ ಪುಟದಿಂದ

4. ರಾಜಕೀಯದಲ್ಲಿ ಶ್ರೀ ದೇವರ ಗುಂಡ ವಿ. ಸದಾನಂದ ಗೌಡ M.L.A. ಹಾಗೂ Legislative Assembly ಯ ವಿರೋಧ ಪಕ್ಷದ ನಾಯಕ.
5. ಇದೀಗ "10 ಕುಟುಂಬ..18 ಗೋತ್ರದ ಗೌಡರ ವಿಶ್ವ ಸಮ್ಮೇಳನದ ಸಮಯ"

***ವಿ. ಸೂ.:*** ಈ ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ವಿಚಾರವಂತ ಲೇಖನಕ್ಕೆ ಸದಾ ಸ್ವಾಗತವಿದೆ. ಶ್ರೀ ಅನಂತರಾಜ್ ಗೌಡರ ದೂರ ದೃಷ್ಟಿಯ ಚಿಂತನೆಯ ವಿಕಾಸವು"ಹತ್ತು ಕುಟುಂಬ ಹದಿನೆಂಟು ಗೋತ್ರ"ದ ಗೌಡ ಜನರ ಅಭಿವೃದ್ಧಿಗೆ ನಾಂದಿಯಾಗಲಿ" ಎಂದು ಹಾರೈಸುವೆವು. ಒಂದು ಜನಾಂಗದ ಅಭಿವೃದ್ಧಿಯೇ ಒಂದು ದೇಶದ ಪ್ರಗತಿಯೆಂದು ತಿಳಿದು ನಾವೆಲ್ಲರು ಸಂಘಟಿತರಾಗುತ್ತಾ ಅಭಿವೃದ್ಧಿ ಹಾದಿಯಲ್ಲಿ ಮುನ್ನುಗ್ಗುತ್ತಾ ನಮ್ಮಲ್ಲಿರುವ ಹುಳುಕು / ಮತ್ಸರ/ ದ್ವೇಷ ಇತ್ಯಾದಿಗಳನ್ನು ದೂರ ಸರಿಸುತ್ತಾ ಮುನ್ನಡೆದಲ್ಲಿ ನಮ್ಮ ಕುಲಗುರು ವೆಂಕಟರಮಣನು ಸದಾ ನಮ್ಮೊಡನೆ ಇದ್ದು ಖಂಡಿತ ಹರಸುವನೆಂದು ನಾವು ದೃಢವಾಗಿ ನಂಬಿದ್ದೇವೆ.

-ಸಂಪಾದಕಿ.

---

ಕಂಡದ್ ಹೇಳಿರೆ ಕೆಂಡದಂತ ಕೋಪ

# ತಿದ್ದುಪಡಿ

**ಕೊಡಗು ಸಂಗಾತಿ ಪತ್ರಿಕೆಯಲ್ಲಿ ಸಂಪುಟ : 6, ಸಂಚಿಕೆ 9 -10 ಪುಟ : 19 ಗೌಡರು : 3(A) 1(j)**

| | Correct | Pages | Lines | Wrong |
|---|---|---|---|---|
| 1 | ಪ್ರವರ್ಗ III (ಎ) 1(j) | 19 | 1 | 3(A) 1(j) |
| 2 | ಸಕ:225:ಬಿಸಿಎ | 19 | 16 | ಸಕಇ:ಬಿಸಿಎ |
| 3 | ಆದಾಯ :ಜಾತಿ | 20 | 31 | ಅಯಾಯ :ಜಾತಿ |
| 4 | Gowda | 20 | 19 | Gounder |
| 5 | Orissa : Gouda | 20 | 20 | Orissa : Goud |
| 6 | _____ | 20 | 21 | Madya Pradesh - Gond. |

Gowda/Gouda is covered under the category codes used in the seat Matrix of Engineering Medical and Dental Courses Common Entrance test 2002 Bangalore as 3AG (General 3AR (Rural) 3AK (Kannada)

**Mrs. Prabha Kariappa**

*ಬಾಲ ಸಂಗಾತಿ*

## ಕೊಂಬು ಯಾಕೆ ಮೂಡ್‌ತ್ಲೆ.

ಒಂದು ಊರ್‌ಲಿ ಒಬ್ಬ ರೈತ ಇತ್. ಅಂವ ಕಷ್ಟ ಪಟ್ಟ್ ಹೊಲಲಿ ದುಡ್‌ದ್ ಒಳ್ಳೇ ಜೀವನ ಸಾಗ್‌ಸ್ತಿತ್. ಅವನ ಹೆಣ್ಣ್ ಅಂವಂಗೆ ಸಹಾಯ ಮಾಡ್‌ತಿತ್. ಅಂವ ದನಕರ್‌ಗಳ್ನ, ನಾಯಿಕೊತ್ತಿಗಳ್ನ ಸಾಕಿದ್ದದೆ. ಮನೆ ಸುತ್ತಮುತ್ತ ತರತರದ ಹಣ್ಣ್‌ನ ಮರಗಳ್ನ ಸಹ ಬೆಳ್‌ಸ್ದದೆ. ಅವರ್ನೆಲ್ಲ ಮನೆಹ ಸದಸ್ಯರಂಗೆ ನೋಡಿಕಂಡಿದ್ದದೆ. ಅವನ ಮಂಜ ಕೃಷಿ ವಿಜ್ಞಾನ ಓದಿ ಹೆಚ್ಚಿನ ಸಂಶೋಧನೆಗಾಗಿ ಅಮೇರಿಕಾ ದೇಶಕ್ಕೆ ಹೋಗಿ, ಒಳ್ಳೆ ಹೆಸ್‌ರ್ ಪಡ್‌ಕಂಡ್ ಬಂದಿದ್ದದೆ. ಅವಂಗೆ ಒಳ್ಳೆ ಅಧಿಕಾರಿ ಕೆಲ್ಸ ಸಿಕ್ಕಿತ್.

ಒಮ್ಮೆ ಅಂವ ಜಾಸ್ತಿ ದಿನ ರಜಲಿ ಊರಿಗೆ ಬಂದಿತ್. ಆಗ ಒಂದು ಆರ್ ತಿಂಗಳ ಕರ್‌ನ ನೊಡಿ ಈ ಕರ್‌ನ ನಾನ್ ವೈಜ್ಞಾನಿಕ ರೀತಿಲಿ ಬೇಗ ದೊಡ್ಡದಾಗಿ ಬೆಳ್‌ಸಿನೆತ ಅಪ್ಪನೊಟ್ಟಿಗೆ ಹೇಳ್. ಅಪ್ಪ ಆಗಲಿತ ಒಪ್ಪಿತ್. ಮಂಜ ಆ ಕರ್‌ನ ಒಳ್ಳೆ ಗಾಳಿ ಬೆಳ್‌ಕ್ ಇರುವ ಸ್ವಚ್ಛವಾದ ಕೊಟ್ಟಿಗೆಲಿ ಕೂಡಿ ಹಾಕಿತ್. ಅದ್‌ಕೆ ದಿನಕೊಂದ್ ಸಲ ಸ್ನಾನ ಮಾಡ್ಸಿ ಒಳ್ಳೆ ಸಿದ್ದ ಪಡಿಸಿದ ಆಹಾರನ ಕೊಟ್ಟಿತ್. ಒಳ್ಳೆ ಔಷಧಿನ (ಬೇಗ ಬೆಳೆಯಕೆ) ಸನಾ ಕೊಟ್ಟ್‌ಕೊಂಡ್ ಲಾಯಿಕ್ ನೋಡಿಕಂಡಿತ್.

ಒಂದೆರಡ್ ತಿಂಗ ಕಳೆಯಕಾಕನ ಕರ್ ಒಳ್ಳೆ ಮಾಂಸದ ಮುದ್ದೆ ತರ ಬೆಳ್. ಮೂಳೆಗಳೇ ಕಾಣದಂಗೆ ಬೇಗ ದೊಡ್ಡದಾತ್. ಎಲ್ಲಾ ಸರಿ? ಆದರೆ ಈ ಎತ್ತ್‌ಗೆ ಈಗ ಕೊಂಬೇ ಮೂಡ್‌ತ್ಲೆ. ಕೊಂಬು ಮೂಡುವ ಜಾಗ ಮುಟ್ಟಿರೆ ಮೆತ್ತಂಗೆ ಇತ್. ಮಂಜಂಗೆ ಚಿಂತೆ ಆತ್. ಬೇರೆ ಏನೇನೋ ಔಷಧಿಗಳ ಕೊಟ್ಟಿತ್ ಅಷ್ಟೊತ್ತಿಗೆ ಅವಂಗೆ ಅರ್ಜೆಂಟಾಗಿ ಬೇರೆ ಕಡೆ ಕೆಲಸದ ಮೇಲೆ ಹೋಕಾತ್. ಅಂವ ಅಪ್ಪಂಗೆ ಈ ಹೋರಿನ ಜವಬ್ದಾರಿನ ವಹಿಸಿ ಹೋತ್.

ಮಂಜ ಅತ್ತ ಹೋದಂಗೆ ಅಪ್ಪ ಹೋರಿನ ಬಂದನಂದ ಬಿಡ್ಸಿ ಹೊರಗೆ ಬುಟ್ಟತ್. ಸುರು ಸುರುಲಿ ಮೈ ಭಾರಕೆ ಈ ಹೋರಿ ಕರ್‌ಗೆ ಕಷ್ಟ ಆತಿತ್. ಕ್ರಮೇಣ ಬೊಜ್ಜು ಕರಗಿ, ಚುಳ್ಳಿಕೆ ಸುರು ಮಾಡ್. ಬೇರೆ ಸರಿ ವಯಸ್‌ನ ಕರ್‌ಗಳೊಟ್ಟಿಗೆ ಕುತ್ತಿಕಂಡ್, ಮಣ್ಣ್ ದಿಣ್ಣೆಗೆ ಕುತ್ತಿಕಂಡೆ ತನ್ನ ಸಹಜ ಆನಂದನ ಅನುಭವಿಸಿತ್. ಹಸಿರ್ ಹುಲ್ಲು ಮೇದ್‌ಕಂಡ್ ಖುಷಿಲಿ ಇತ್. ಈಗ ಆ ಹೋರಿಗೆ ಕೊಂಬು ಮೂಡುವ ಜಾಗ ಗಟ್ಟಿಯಾಗಿ ಮೂಡಿಕೆ ಸುರ್ ಆತ್.

ಸ್ವಲ್ಪ ದಿನ ಕಳ್ದ್ ಮಂಜ ಮನೆಗೆ ಬಾತ್. ಹೋರಿ ಕರ್‌ಗೆ ಕೊಂಬು ಮೂಡ್‌ದ್ ನೋಡಿ ಖುಷಿಲಿ ಅಪ್ಪನೊಟ್ಟಿಗೆ ನೀನ್ ಹೊತ್ತು ಹೊತ್ತಿಗೆ ಸರಿಯಾಗಿ ಔಷಧಿ ಕೊಟ್ಟೊಳಲಾ ಅದರ ಪರಿಣಾಮ ಈ ಕೊಂಬುತ್ತೇಳ್. ಅಪ್ಪ ಹೇಳ್ ಇಲ್ಲೆಇದ್ ಪ್ರಕೃತಿದ್ ಪರಿಣಾಮ. ಬಂಧನದ ಮುಕ್ತಿ ಮಾಡ್ದೆ ಅದ್ ಸಹಜ ಆಗಿ ಸಮ ವಯಸ್ಕರೊಟ್ಟಿಗೆ ಮತ್ತೆ ಮಣ್ಣ್ ದಿಣ್ಣೆಗೆ ಕುತ್ತಿಕಂಡ್ ಇದ್ದದರ್‌ದ ನಿಸರ್ಗ ಮಾಡ್ದ ಚಮತ್ಕಾರತ್ತೇಳ್. ಮಗ ಸುಮ್ಮನೆ ಅಪ್ಪನ ಅಭಿಪ್ರಾಯನ ಒಪ್ಪಿತ್.

-ಬಿಟ್ಟೀರ ಚೋಂದಮ್ಮ, ಶಂಭು.

# ಮರಗಳ ಘನ ಪ್ರಮಾಣ (Volume) ಕಂಡು ಹಿಡಿದು ಬೆಲೆ ನಿರ್ಧರಿಸುವುದು ಹೇಗೆ?

ನಾವು ಶಾಲಾ ಕಾಲೇಜುಗಳಲ್ಲಿ ಓದುವಾಗ ಗಣಿತ ಒಂದು ಮುಖ್ಯವಾದ ವಿಷಯ (Subject) ವಾಗಿದ್ದು ಅನೇಕ ರೀತಿಯ ಸೂತ್ರಗಳನ್ನನುಸರಿಸಿ ನೆಲ, ಜಲ, ಘನವಸ್ತುಗಳ ವ್ಯಾಪ್ತಿ (ಚದರ) ಮತ್ತು ಪ್ರಮಾಣ (Volume) ಗಳನ್ನು ಕಂಡು ಹಿಡಿಯುವುದನ್ನು ತಿಳಿದು ಕೊಂಡಿರುತ್ತೇನೆ. ಸ್ತಂಭದ ಘನಫಲ $\pi r^{2h}$ ಎಂದು ಸರ್ವ ಸಾಮಾನ್ಯ ಎಲ್ಲರಿಗೂ ತಿಳಿದಿರುತ್ತದೆ. ಆದರೆ ಮರದ ದಿಮ್ಮಿ (ನಾಟ) ಪೂರ್ತಾ(Perfect) ಸ್ತಂಭವಾಗಿರದೆ ಇರುವುದರಿಂದ ಮೇಲೆ ಹೇಳಿದ ಸೂತ್ರ ಉಪಯೋಗಿಸಿದರೆ ನಾಟದ ಘನ ಪ್ರಮಾಣ ಹೆಚ್ಚಾಗಿ ಸೂಚಿಸುವ ಸಾಧ್ಯತೆ ಇದೆ. ಯಾಕೆಂದರೆ ಸ್ತಂಭದ ಸುತ್ತಳತೆ ಎಲ್ಲಾ ಕಡೆ ಒಂದೇ ಇರುತ್ತದೆ. ಆದರೆ ನಾಟದ ಸುತ್ತಳತೆ ಬುಡದಿಂದ ತುದಿಯವರೆಗೆ ಒಂದೇ ಇರುವುದಿಲ್ಲ. (ಚಿತ್ರ ಗಮನಿಸಿ) ಆದುದರಿಂದ ನಾಟದ ಘನ ಪ್ರಮಾಣ ಕಂಡು ಹಿಡಿಯಲು ವಿಶೇಷವಾದ ಒಂದು ಸೂತ್ರವಿದೆ. ಅದನ್ನು ಫಾರೆಸ್ಟ್‌ನ ಕಾಲೇಜ್ ಮುಂತಾದ ಕಡೆ ಮಾತ್ರ ಹೆಚ್ಚಿನದಾಗಿ ಹೇಳಿಕೊಡಲಾಗುತ್ತದೆ.

ಸ್ತಂಭ ನಾಟ

ಆ ಸೂತ್ರ ಇಂತಿದೆ.

$(\frac{g}{4})^2 x L$ g = ನಾಟದ ಸುತ್ತಳತೆ (ಮಧ್ಯದಲ್ಲಿ)
L = ನಾಟದ ಉದ್ದ

ಅಥವಾ

$\frac{gxg}{16} x L$

ಉದಾಹರಣೆಗೆ ಒಂದು ನಾಟದ ಸುತ್ತಳತೆ 4' ಇದೆ ಎಂದಿಟ್ಟುಕೊಳ್ಳೋಣ. ಅದರ ಉದ್ದ 15' ಇದೆ ಎಂದಿಟ್ಟು ಕೊಳ್ಳೋಣ. ಆಗ ಅದರ ಘನಫಲ (Volume)

$\frac{4x4}{16} x 15 = \frac{4x4}{16} x 15 = 15$ cft (ಘನ ಅಡಿ)

ಅದರ ಬೆಲೆ: ಒಂದು ಘನ ಅಡಿಗೆ ರೂ. 500/- ಎಂದು ಮಾರ್ಕೆಟ್ ಬೆಲೆ ಇದ್ದರೆ, 15' ಉದ್ದ, 4' ಅಡಿ ದಪ್ಪದ ಮರದ ಬೆಲೆ = 15x500 = 7500/-!.

ಈ ಸೂತ್ರದಂತೆ ನಿಂತ ಮರದ ಪ್ರಮಾಣವನ್ನು ಕಂಡು ಹಿಡಿಯಬಹುದು. ಆಗ ಮರದ ಉದ್ದ (L) ಮರದ ಮೊದಲನೇ ಕೊಂಬೆವರೆಗೆ ಇರುವ ಉದ್ದವನ್ನು ಅಂದಾಜಿಸಬೇಕು. ಅಥವಾ ಸಾಧ್ಯವಾದಲ್ಲಿ ಅಳತೆ ಮಾಡಬಹುದು. ದಪ್ಪ (g) ಎದೆ ಮಟ್ಟಕ್ಕೆ (ನೆಲದಿಂದ $4\frac{1}{2}$' ಗೆ ) ತೆಗೆದುಕೊಂಡು ಮೇಲ್ಕಂಡ ಸೂತ್ರವನ್ನನುಸರಿಸಿ ಘನ ಪ್ರಮಾಣ ನಿಗದಿ ಪಡಿಸಿ ಅಂದಾಜು ಬೆಲೆ ನಿರ್ಧರಿಸಿ ವ್ಯವಹರಿಸಬಹುದು.

ನಮ್ಮ ಜನರಿಗೆ ಹೆಚ್ಚಿನವರಿಗೆ ಮರದ ಪ್ರಮಾಣ ನಿಗಧಿ ಮಾಡಲು ಬಾರದೆ ಅವರ ಜಮೀನಿನಲ್ಲಿರುವ ಬೆಲೆ ಬಾಳುವ ಮರಗಳನ್ನು ಕಡಿಮೆ ಬೆಲೆಗೆ ಕೊಟ್ಟು ನಷ್ಟ ಅನುಭವಿಸುತ್ತಾರೆ. ಮೇಲ್ಕಂಡ ಸೂತ್ರವು ತಿಳಿದದ್ದೇ ಆದರೆ ಮರಗಳನ್ನು ಮಾರಾಟ ಮಾಡುವ ಮೊದಲೇ ದರವನ್ನು ತಾವೇ ಹೆಚ್ಚು ಕಡಿಮೆ ನಿಖರವಾಗಿ ಅಂದಾಜು ಮಾಡಿ ತಮಗೆ ಆಗುವ ನಷ್ಟವನ್ನು ತಪ್ಪಿಸಿಕೊಳ್ಳಬಹುದು. ಆದುದರಿಂದ ಮೇಲ್ಕಂಡ ಸೂತ್ರವನ್ನನುಸರಿಸಿ ಜನರು ತಮ್ಮ ಜಮೀನಿನಲ್ಲಿರುವ ಬೆಲೆಬಾಳುವ ಮರಗಳ ನಿಜವಾದ ಬೆಲೆಯನ್ನು ನಿರ್ಧರಿಸಿ ವ್ಯವಹರಿಸಬಹುದು.

ಇದೇ ರೀತಿ ಕೊಯ್ದ ಮರದ ಸೈಜು (Sawn Sizes) ಗಳ ಘನ ಪ್ರಮಾಣವನ್ನು ಈ ಕೆಳಗಿನ ಸೂತ್ರದಿಂದ ನಿರ್ಧರಿಸಬಹುದು.

L x B x W

ಉದ್ದ x ಅಗಲ x ದಪ್ಪ

ಉದಾ: ಒಂದು ಸೈಜು 12' ಉದ್ದ 1' ಅಗಲ 2'' ಇಂಚು ದಪ್ಪ ಇದೆ ಎಂದಾದರೆ ಅದರ ಪ್ರಮಾಣ (Volume)

$12 x 1 x \frac{2}{12} = 2$cft ಘನ ಅಡಿ.

(ಇಲ್ಲಿ ದಪ್ಪ 2'' ನ್ನು ಅಡಿಗೆ ಪರಿವರ್ತಿಸಿಕೊಳ್ಳಬೇಕು ಆದುದರಿಂದ 2 ನ್ನು 12 ರಿಂದ ಭಾಗಿಸಬೇಕು. 1' ಗೆ 12'' ಆದುದರಿಂದ ಎಲ್ಲವನ್ನು ಅಡಿಯಲ್ಲಿ ಪರಿವರ್ತಿಸಿ (Convert) ಲೆಕ್ಕ ಮಾಡಬೇಕು.

ಈ ರೀತಿ ಮರದ ಪ್ರಮಾಣ ಲೆಕ್ಕ ಹಾಕಲು ತಿಳಿದಿದ್ದರೆ ನೀವು ಮರಗಳನ್ನು ಮಾರುವಾಗಲೇ ಆಗಲಿ ಕೊಂಡುಕೊಳ್ಳುವಾಗಲೇ ಆಗಲಿ ಮೋಸ ಹೋಗುವ ಅವಕಾಶ ಇರುವುದಿಲ್ಲ.

-(ಪಾಣತ್ತಲೆ ರಾಮಯ್ಯ) ನಿವೃತ್ತ ಉಪ ಅರಣ್ಯ ಸಂರಕ್ಷಣಾ ಧಿಕಾರಿ,
"ಪುನರ್ವಸು" No. 1777/5 ವಿನಾಯಕಬಡಾವಣೆ 2ನೇ ಕ್ರಾಸ್ ವಿದ್ಯಾನಗರ, ದಾವಣಗೆರೆ - 577 005
Code - 08192/Ph : 60040

## *ಸಂತೋಷ ಬೇಕೆ?!*

- 3ನಿಮಿಷ ಸಂತೋಷಪಡಲು ಗೆಳೆಯನೊಡನೆ ಫೋನಿನಲ್ಲಿ ಮಾತಾಡಿ.
- 30ನಿಮಿಷ ಸಂತೋಷಪಡಲು ಒಂದು ಹಾಸ್ಯ ಲೇಖನ ಓದಿ.
- ಒಂದು ಗಂಟೆ ಸಂತೋಷಪಡಲು, ನಿದ್ರೆ ಮಾಡಿರಿ.
- ಮೂರು ಗಂಟೆ ಸಂತೋಷವಾಗಿರಲು ಸಿನಿಮಾ ನೋಡಿರಿ.
- ಒಂದು ದಿನ ಸಂತೋಷಪಡಲು ಪಿಕ್‌ನಿಕ್‌ಗೆ ಹೋಗಿರಿ.
- ಒಂದು ವಾರ ಸಂತೋಷಪಡಲು ದೂರದೂರಿಗೆ ಪ್ರವಾಸ ಹೋಗಿ.
- ಒಂದು ತಿಂಗಳು ಸಂತೋಷಪಡಬೇಕೆ ಮದುವೆಯಾಗಿ
- ಒಂದು ವರ್ಷ ಸಂತೋಷಬೇಕೆ ಲಾಟರಿ ಬಹುಮಾನ ಗೆಲ್ಲಿರಿ.
- ಜೀವನ ಪೂರ ಸಂತೋಷದಿಂದಿರಬೇಕೆ
  - ನೀವು ಮಾಡುವ ಪ್ರತಿಯೊಂದು ಕೆಲಸದಲ್ಲೂ
  - ಆನಂದವನ್ನು ಅನುಭವಿಸುವುದನ್ನು ಕಲಿಯಿರಿ.

- ಎಡಿಕೇರಿ ಸುದರ್ಶನ್, ಬೆಂಗಳೂರು.

# "ರೈತ ನಮ್ಮ ಕೊಡಗಿನ ರೈತ"

ನಮ್ಮ ದೇಶ ಭಾರತ ಇದು "ರೈತ" ದೇಶ ಎಂದರೆ ತಪ್ಪು ಆಗಲಾರದು. ನಮ್ಮ ದೇಶದಲ್ಲಿ 100 ಕ್ಕೆ 75 ರಷ್ಟು ರೈತರೇ ಇರುವುದು. ಇದರಿಂದ ರೈತನನ್ನು ನಮ್ಮ ದೇಶದ ಬೆನ್ನೆಲುಬು ಎನ್ನುತ್ತಾನೆ. ಒಬ್ಬ ಮನುಷ್ಯನಿಗೆ ಬೆನ್ನೆಲುಬು ಎಷ್ಟು ಮುಖ್ಯವೋ, ಅಷ್ಟೇ ಮುಖ್ಯ ನಮ್ಮ ದೇಶಕ್ಕೆ ರೈತ. ಆದರೆ ರೈತನಿಗೆ ಮಾತ್ರ ಜೀವಮಾನ ತುಂಬಾ ಕಷ್ಟ.

ರೈತನಿಗೆ ಸಮಯಕ್ಕೆ ಸರಿಯಾಗಿ ಮಳೆ ಬರದಿದ್ದರೆ ಅಥವಾ ವಿಪರೀತ ಮಳೆಯಾದರೆ, ಅತೀವೃಷ್ಠಿ ಅಥವಾ ಅನಾವೃಷ್ಠಿ ಯಾವುದಾದರು ಒಂದು ಸಂಭವಿಸಿದರೆ ಅವನ ಪಾಡು ಹೇಳತೀರದು. ಆದಕ್ಕೆ ಪರಿಹಾರ ಸರಕಾರ ಒದಗಿಸಿದರು ಸಹ, "ದೇವರು ವರ ಕೊಟ್ಟರು ಪೂಜಾರಿ ಕೊಡಲಿಲ್ಲ" ಎಂಬಾಂತಗುತ್ತದೆ ಅವನ ಸ್ಥಿತಿ.

ರೈತ ನಮ್ಮ ದೇಶದ ಒಳಿತಿಗಾಗಿ ಎಷ್ಟೆಲ್ಲ ಪ್ರಯತ್ನ ಪಟ್ಟರು ಸಹ, ಅವನಿದೆ ಸಿಗುವ ಮರ್ಯಾದೆ ಮಾತ್ರ ಶೂನ್ಯ. ಒಂದು ಸಮಾರಂಭದಲ್ಲಿ ಒಬ್ಬ ಅಧಿಕಾರಿಗೆ ಇರುವ ಮರ್ಯಾದೆ ರೈತನಿಗೆ ಸಿಗುವುದಿಲ್ಲ.

ಇಷ್ಟೆಲ್ಲ ರೈತರ ಪೈಕಿ ನಮ್ಮ ಕೊಡಗಿನ ರೈತರು ಕೂಡ ಸೇರುತ್ತಾರೆ. ಕೊಡಗು ನಾನಾ ಜನಾಂಗವನ್ನು ಹೊಂದಿದೆ. ಗೌಡ, ಕೊಡವ, ಒಕ್ಕಲಿಗ, ಹೆಗ್ಗಡೆ, ಅಮ್ಮಕೊಡವರು ಹೀಗೆ ಇತ್ಯಾದಿ ಈ ಎಲ್ಲಾ ಜನಾಂಗದಲ್ಲಿ ಕೊಡಗಿನ ಕಠಿಣ ಶ್ರಮಿಗಳೆಂದರೆ ಗೌಡರೆ ಸರಿ." ಹೆಚ್ಚಿಗೆಯೆನ್ನಬೇಕೆಂದರೆ ಗೌಡರ ವೃತ್ತಿಯೇ ವ್ಯವಸಾಯ.

ಗೌಡರ ವ್ಯವಸಾಯ ಕಾರ್ಯ ಹೇಗೆ ಆರಂಭವಾಗುವುದೆಂದರೆ ಮೊದಲಿಗೆ, ಬೀಜ ಬಿತ್ತುವುದು. ಯುಗಾದಿ ದಿನದಿಂದ ಜನರು ಕೃಷಿಯ ಕೆಲಸಗಳಲ್ಲಿ ತೊಡಗುತ್ತಾರೆ. ಬೇಸಾಯ ಪ್ರಾರಂಭ ಮಾಡುವುದಕ್ಕೆ ಭತ್ತದ ಬೀಜವನ್ನು ಬಿತ್ತುವುದಕ್ಕೆ ಗದ್ದೆಯನ್ನು ಕಾದಿರಿಸಿ ಅದನ್ನು ಉತ್ತು ಏಕ್ಲಾ ಅಥವಾ ಅಗಾಡಿ ಇದನ್ನು ಬಹಳ ಕ್ರಮ ಬದ್ಧವಾಗಿ ತಯಾರಿಸುತ್ತಾರೆ.

ಬೀಜ ಬಿತ್ತುವುದಕ್ಕೆ ಮೊದಲು ಬೀಜ ಬಿತ್ತುವುದಕ್ಕೆ ಯೋಗ್ಯವಾದ ನಕ್ಷತ್ರ ಕರಣ, ವಿಷ ಅಮೃತ ಘಳಿಗೆಗಳನ್ನು ಪಂಚಾಂಗ ನೋಡುವವರ ಸಹಾಯದಿಂದ ತಿಳಿದು ಅದಕ್ಕನುಸಾರವಾಗಿ ಬೀಜ ಬಿತ್ತುವ ರೂಢಿಯಲ್ಲಿದೆ. ಇದರಿಂದ ಭತ್ತದ ಸಸಿಗಳಿಗೆ ಕ್ರಿಮಿ, ಕೀಟ, ಮೃಗ ಮತ್ತು ಪಕ್ಷಿಗಳ ಹಾವಳಿಯಿಂದ ವಿಮುಕ್ತಗೊಳಿಸಲು ಈ ಮುಂಜಾಗ್ರತೆ ವಹಿಸುತ್ತಾರೆ. ಈ ರೀತಿ ತಯಾರಾದ ಅಗಾಡಿಗೆ ಫಲ ಫಲ ಎಂದು ಹೇಳುತ್ತಾ ಬೀಜ ಬಿತ್ತುತ್ತಾರೆ.

***ಅಗೆ ತೆಗೆಯುವುದು:*** ಪ್ರಥಮ ಅಗೆ ತೆಗೆಯುವ ದಿನ ಮನೆಯ ಯಜಮಾನಿಯು ಶುಚಿಯಾದ ಉಡುಪನ್ನುಉಟ್ಟು ಬೆಳಗಿನ ಸಮಯದಲ್ಲಿ, ಹಾಲು ಅಕ್ಕಿ, ಬೆಲ್ಲ ಏಲಕ್ಕಿ ತೆಗೆದುಕೊಂಡು ಹೋಗಿ 'ದೋರೆ' ಸೊಪ್ಪನ್ನು ತಂದು ಗದ್ದೆಯ ಏರಿಯ ಮೇಲೆ ಸೊಪ್ಪನ್ನೂ ಮೂಡ ದಿಕ್ಕಿಗೆ ಮುಖ ಮಾಡಿ ಇಟ್ಟು ಅದರಲ್ಲಿ ಈ ಹಾಲು ಅಕ್ಕಿ, ಬೆಲ್ಲ ಹೂಗಳಿಟ್ಟು ಪೂಜಿಸಿ ಮೂಡು ದಿಕ್ಕಿಗೆ ಮುಖ ಮಾಡಿ ಶ್ರೀ ಮೂಲ ಕಾವೇರಮ್ಮ ಮತ್ತು ಇಗ್ಗುತಪ್ಪ ದೇವರನ್ನು ಮನಸ್ಸಾರೆ ನೆನೆಯುತ್ತಾ ಅಗೆಗೆ ಹಾಲೆರೆದು ಫಲಿಯೇ ಎಂದು ಹೇಳಿ ಅಗೆ ತೆಗೆಯುತ್ತಾರೆ.

***ಅಗೆ ಪೂಜೆ :*** ಒಂದೊಂದು ಕುಟುಂಬದಲ್ಲಿ ಯಾರ ಕಡೆ ಕೊನೆಗೆ ಅಗೆ ತೆಗೆಯುವರೊ, ಅಲ್ಲಿ ಎಲ್ಲಾ ಮಹಿಳೆಯರು ಸೇರಿ ಅಗಾಡಿಯ ಏರಿಯನ್ನು ಚೆನ್ನಾಗಿ ಸಾರಿಸಿ ಅಲ್ಲಿ ಸುರುಳಿ ಎಲ್ಲೆಯಲ್ಲಿ ಅಕ್ಕಿ, ಹಣ್ಣು, ಹೂ, ವೀಳ್ಯದೆಲೆ ಇಟ್ಟು ಪೂಜೆ ಮಾಡಿ ನಂತರ ಅಗೆಯಿಂದಲೆ, ರಸವನ್ನು ತೆಗೆದು ಸುಣ್ಣ ಬೊಟ್ಟನ್ನಿಟ್ಟು ಕೊಳ್ಳುತ್ತಾರೆ. ಇದನ್ನು ಅಗೆ ಪೂಜೆ ಎಂದು ಕರೆಯುತ್ತಾರೆ.

***ನಾಟಿ ನೆಡುವುದು :*** ಮನೆಯ ಯಜಮಾನನು ನಾಟಿ ನೆಡುವ ಗದ್ದೆಯನ್ನು ಸಜ್ಜುಗೊಳಿಸಿ ಗದ್ದೆಗೆ ಅಗೆ ಹಾಕಿ ಗದ್ದೆಯ ಏರಿಯ ಒಂದು ಮೂಲೆಯನ್ನು ಚೆನ್ನಾಗಿ ಸಾರಿಸಿ ಹೂ, ಗಂಧದ ಕಡ್ಡಿ, ಧೂಪ ಹತ್ತಿಸಿ, ಹರಳೆ ಸೊಪ್ಪಿನಲ್ಲಿ ಹಾಲು, ಅಕ್ಕಿ, ಬೆಲ್ಲ ಮುಂತಾದವುಗಳಿಂದ ನೈವೇದ್ಯಯನ್ನಿಟ್ಟು ಪೂಜೆ ಮಾಡಿ ಕಳಿಕಳಿಯಾಗಿ ಬಾ ಎಂಬುದಾಗಿ ಗಂಭೀರ ಸ್ವರದಿಂದ ಉಚ್ಚರಿಸುತ್ತಾ ಹುರುಪಿನಿಂದ ನಾಟಿ ನೆಡುತ್ತಾ ಸಾಗುತ್ತಾರೆ. ನಂತರ ನಾಟಿಗೆ ಬಂದವರೆಲ್ಲಾ ನಾಟಿ ನೆಡಲು ಪ್ರಾರಂಭ ಮಾಡುತ್ತಾರೆ. ಅಗೆ ಮತ್ತು ನಾಟಿ ಕೆಲಸವನ್ನು ಒಬ್ಬರನ್ನೊಬ್ಬರು ಸಹಕರಿಸಿ ಕೂಡಿಕೊಂಡು ಒಗ್ಗಟ್ಟಾಗಿ ಮಾಡುತ್ತಾರೆ.

ರೈತರು ನಾಟಿ ಮತ್ತು ಅಗೆ ಕೆಲಸದಲ್ಲಿ ಮಗ್ನರಾಗುವ ಈ ಕಾಲದಲ್ಲಿ ಅವರಿಗೆ ಬೇರೆ ಯಾವ ರೀತಿಯ ಸಂತೋಷ ಕೂಟಗಳಲ್ಲಿ ಭಾಗವಹಿಸಲು ಮತ್ತು ಭವ್ಯ ಬೋಜನಗಳನ್ನು ಮಾಡಲು ಅವಕಾಶವಿಲ್ಲದ್ದರಿಂದ ಪ್ರತಿಯೊಬ್ಬ ಸದಸ್ಯನ ಪರವಾಗಿ ಒಂದು ಸಮೂಹ ಊಟ ಏರ್ಪಾಡು ಮಾಡಿದ ಹಾಗೆಯೂ ಕೆಲಸವೂ ಹಾಳಾಗದ ಹಾಗೆಯೂ ಒಂದೊಂದು ಕಂಬಳ ನಾಟಿ ಎಂಬುದಾಗಿ ಏರ್ಪಾಡು ಮಾಡುತ್ತಾರೆ. ಈ ಕಂಬಳ ನಾಟಿಯಲ್ಲಿ ಭವ್ಯ ಭೋಜನವನ್ನು ಏರ್ಪಡಿಸಿ ಗದ್ದೆಯಲ್ಲಿ ಓಡುವ ಸ್ಪರ್ಧೆಯನ್ನು ಇಡುತ್ತಾರೆ. ಆ ಕಂಬಳದ ಓಟದ ವೀಕ್ಷಣೆಗಾಗಿ ಸುತ್ತಮುತ್ತಲಿನ ಊರಿನಿಂದಲೂ ದೂರದ ಊರಿನಿಂದಲೂ ಜನರು ಬರುತ್ತಾರೆ. ಇದೊಂದು ಮನರಂಜನೆಯ ಸಂದರ್ಭವೂ ಹೌದು. ಓಡುವುದರಲ್ಲೂ ಮಾತ್ರವಲ್ಲದೆ, ನಾಟಿ ನೆಡುವುದರಲ್ಲಿಯೂ ಸ್ಪರ್ಧೆಗಳಿವೆ. ನಾಟಿ ನೆಡುವಾಗ ಚುರುಕಾಗಿ ನೆಡದವರನ್ನು ಹಾಸ್ಯ ಮಾಡಿ ಜರೆಯುತ್ತಾರೆ. ನಾಟಿ ನೆಡುವ ಸಮಯದಲ್ಲಿ ಹಲವಾರು ಕಥೆ ಒಗಟು ಹೇಳುವುದರಿಂದ ಕೆಲಸದ

ಕಷ್ಟವೇ ಅರಿವಿಲ್ಲದೆ ನಾಟಿ ನೆಡುವುದು ಬಹಳ ಚುರುಕಾಗಿ ಸಾಗುತ್ತದೆ. ಇವೆಲ್ಲವೂ ನಮ್ಮ ಪೂರ್ವಜರು ಯಾವ ರೀತಿಯಲ್ಲಿ ಒಗ್ಗಟ್ಟಿನಿಂದ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದರೆಂಬುದು ಅರಿವಾಗುತ್ತದೆ. ಕೆಲಸವನ್ನು ಒಟ್ಟುಗೂಡಿ ಸಂತೋಷದಿಂದ ನಗು ನಗುತ್ತಾ ಮಾಡುತ್ತಿದ್ದರೆಂಬುದನ್ನು ನಾವು ತಿಳಿದುಕೊಳ್ಳಬಹುದು.

ನಾಟಿ ನೆಟ್ಟ ಆ ದಿನದ ನಾಟಿಯನ್ನು ಎಲ್ಲರೂ ನಾಟಿ ಕೂಡುವ ಸಮಯದಲ್ಲಿ ಓಹೊಯ್ಯಾ ಓಹೊ ಹೊಯ್ಯಾ ಎಂಬುದಾಗಿ ಎಲ್ಲರೂ ಗಟ್ಟಿಯಾಗಿ ಕೂಗುತ್ತಾರೆ. ಇದರಿಂದ ಅಕ್ಕ ಪಕ್ಕದವರಿಗೆ ಕಂಬಳ ನಾಟಿ ಕೂಡಿತು ಎಂಬ ಸಂಕೇತ ಗೊತ್ತಾಗುತ್ತದೆ.

ನಾಟಿ ಕೆಲಸ ಕೊನೆಗೊಳ್ಳುವ ಸಮಯದಲ್ಲಿ ಗಣೋದಿ ಎಂಬ ಪೂಜೆಯನ್ನು ಮಾಡುತ್ತಾರೆ. ಆಗ ಮನೆಯ ಯಜಮಾನನು ಗದ್ದೆಯ ಏರಿಯ ಮೂಲೆಯಲ್ಲಿ ಶ್ರೀ ಗಣಪತಿಗೆ ನೈವೇದ್ಯ ಇಟ್ಟು ಕಳಿ ಕಳಿ ನಾಟಿ ಶ್ರೀ ಕಾವೇರಮ್ಮನ ಮನದಂತೆ, ಇಗ್ಗು ತಪ್ಪನ ಶಿಖರದಂತೆ, ಕಾವೇರಿ ವಾಟೆ ಪಡದಂತೆ ದೇವರಿಗೂ ನನಗೂ ಸಮಭಾಗವಾಗುವಂತೆ ಏಂಗೂ ಭಾರಿಗೂ ಮುಟ್ಟಿ ಬೆಳೆಯುವಂತೆ ಬೆಳೆಯಲಿ ಎಂದು ಹಾರೈಸಿ ನಾಟಿಯನ್ನು ಮುಕ್ತಾಯ ಗೊಳಿಸಿ ಶ್ರೀ ಗಣಪತಿಯ ಪ್ರಸಾದವನ್ನು ಎಲ್ಲರಿಗೂ ಹಂಚಿ ಸ್ವೀಕರಿಸುವರು.

***ನೇಗಿಲು ಪೂಜೆ***: ಗದ್ದೆ ಉಳುವುದು ಕೊನೆಗೊಂಡಿತೆಂದು ಕಂಡು ಬಂದ ಮೇಲೆ ನೇಗಿಲು, ನೊಗ, ಗುದ್ದಲಿ ಮುಂತಾದ ರೈತನು ಕೃಷಿಯ ಕೆಲಸಕ್ಕೆ ಉಪಯೋಗಿಸುವುದಕ್ಕೆ ಉಪಯೋಗಿಸುತ್ತಿದ್ದ ಎಲ್ಲಾ ಉಪಕರಣಗಳನ್ನು ಚೆನ್ನಾಗಿ ತೊಳೆದು ಶ್ರೀಗಂಧವನ್ನು ತೇದು ಎಲ್ಲಾ ಉಪಕರಣಗಳಿಗೆ ಹಚ್ಚಿ ಹೂವಿನಿಂದ ಅಲಂಕರಿಸಿ ಕುಟುಂಬದ ಎಲ್ಲಾ ಗಂಡಸರು, ಮಕ್ಕಳು ಸೇರಿ ಪೂಜೆ ಮಾಡಿ ತಮ್ಮ ಗುರುಕಾರಣರನ್ನು ನೆನೆದು ಶ್ರೀ ಕಾವೇರಮ್ಮನೂ ಮನೆಯ ಗುರು ಹಿರಿಯರು ತಮ್ಮ ಎಲ್ಲಾ ಕಾರ್ಯ ಕಲಾಪಗಳಿಗೆ ನೆರವಾಗುವಂತೆಯೂ, ಬಿತ್ತಿದ ಬೆಳೆಗೆ ದನಕರುಗಳು ಸಮೃದ್ಧಿಯಾಗಿ ಬೆಳೆ ಬೆಳೆಯುವುದಕ್ಕೆ ಸರಿಯಾಗಿ ಮಳೆಯಾಗಿ ಸಮೃದ್ಧಿಯಾಗಲೆಂದು ಪ್ರಾರ್ಥಿಸಿ ತೊಳಸಿದ ಹಿಟ್ಟನ್ನು ನೈವೇದ್ಯವನ್ನು ದೇವರಿಗೆ ಇಟ್ಟು ದೇವರನ್ನು ನೆನೆದು ಪ್ರಸಾದ ಸ್ವೀಕರಿಸುತ್ತಾರೆ.

ಹೀಗೆ ಒಂದು ಮಾದರಿಯಲ್ಲಿ ರೈತನ ವ್ಯವಸಾಯ ಮುಗಿಯುತ್ತದೆ. " ಇದು ಕೊನೆಯಲ್ಲ"

**-ಗೋವಿಂದಮನ ಮೋಹನೇಶ್, ಚಂಗಪ್ಪ, ಸುಂಟಿಕೊಪ್ಪ.**



ನಾಡಿನ ಆಗುಹೋಗುಗಳಿಗಾಗಿ ತಪ್ಪದೆ
ಸಂಗಾತಿಯನ್ನು ಒಲೆಗೊಂದರಂತೆ ಸದಸ್ಯರಾಗಿ
ಕೊಂಡು ಓದುವುದನ್ನು ಮರೆಯದಿರಿ



- ಸಂಗಾತಿ



# IV ಮರಸ್ಸು ಒಕ್ಕಲಿಗರು

ಮರಸ್ಸು ಒಕ್ಕಲಿಗರು ಬೆಂಗಳೂರು ತುಮಕೂರು ಕೋಲಾರ ಚಿತ್ರದುರ್ಗ ಜಿಲ್ಲೆಗಳಲ್ಲಿ ವಾಸವಾಗಿದ್ದಾರೆ. ಇವರಲ್ಲಿ ಕೆಲವರು ಲಿಂಗಾಯಿತರಾಗಿದ್ದಾರೆ. ಮರಸ್ಸು ಒಕ್ಕಲಿಗರು ಲಿಂಗಾಯಿತರೊಡನೆ ವಿವಾಹ ಸಂಬಂಧ ಇಟ್ಟುಕೊಂಡಿದ್ದಾರೆ. ಆದರೆ ಈಗ ಈ ಸಂಬಂಧ ಬಹಳ ಕಡಿಮೆಯಾಗಿದೆ. ಇವರನ್ನು ಮರಸ್ಸು ಒಕ್ಕಲಿಗರು ಯಾ ಹೊಸ ದೇವರ ಒಕ್ಕಲು ಎಂಬುದಾಗಿ ಕರೆಯುತ್ತಾರೆ. ಕೆಲವರು ಇವರು ನೆಯಿಗೆ ಹಾಗೂ ಬುಟ್ಟಿ ಹೆಣೆಯುತ್ತಿದ್ದುದರಿಂದ ಇವರಿಗೆ ಮರಸು ಒಂದು ಬಂತೆಂದು ಹೇಳುತ್ತಾರೆ. ಇನ್ನು ಕೆಲವರು ಇವರು ಮರಸ್ಸು ನಾಡು ಎಂಬಲ್ಲಿ ವಾಸಿಸುತ್ತಿದ್ದರಿಂದ ಇವರಿಗೆ ಮರಸ್ಸು ಎಂಬ ಹೆಸರು ಬಂತೆಂದು ಹೇಳುತ್ತಾರೆ.

ಇವರು ಕಾಂಜೀವರಂ ಕಡೆಯಿಂದ ಹಳೇ ಮೈಸೂರು ಪ್ರಾಂತ್ಯಗಳಿಗೆ ಬಂದು ನೆಲೆಸಿದರೆಂದು ಹೇಳುತ್ತಾರೆ. ಇವರು ಈಗಿನ ದೇವನಳ್ಳಿಗೆ 15 ನೇ ಶತಮಾನದಲ್ಲಿ ಬಂದು ಪಾಳ್ಯಗಾರರಾಗಿದ್ದುಕೊಂಡು ದೇವನ ಹಳ್ಳಿ ಕೋಟೆಯನ್ನು ಮಲ್ಲ ಬೈರೇಗೌಡ ಕಟ್ಟಿ 17 ನೇ ಶತಮಾನದವರೆಗೆ ಹೈದರಾಲಿ ಮೈಸೂರಿನ ನಂಜರಾಜ ರಾಜರ ಪರವಾಗಿ ವಶಪಡಿಸಿಕೊಂಡ ಬೆಂಗಳೂರನ್ನು ಕಟ್ಟಿಸಿದ ಕೆಂಪೇಗೌಡನು ಇದೇ ವಂಶಕ್ಕೆ ಸೇರಿದವನು. ಇವರಲ್ಲಿ ಮೂರು ಉಪಜಾತಿಗಳಿವೆ. 1 ಶಾಮ ಸಾಲು 2 ತಿರಲೆಗಟ್ಟಿ ಸಾಲು ಶೆಟ್ಟಿಗಾರ ಸಾಲು ಇವರಲ್ಲಿ ಕೆಲವರು ಕನ್ನಡ ಭಾಷೆಯನ್ನಾಡುತ್ತಾರೆ. ಇನ್ನು ಕೆಲವರು ತೆಲುಗು ಭಾಷೆಯನ್ನಾಡುತ್ತಾರೆ. ಇವರ ಗೋತ್ರ 83 ಗೋತ್ರಗಳಿವೆ. ಈ ಗೋತ್ರಗಳನ್ನು ಮರ, ಪ್ರಾಣಿ ಮತ್ತು, ಇತರ ವಸ್ತುಗಳ ಹೆಸರಿನ ಮೇಲೆ ವಿಂಗಡಿಸಿದ್ದಾರೆ. ಇವರಲ್ಲಿ ವಿಧವಾ ಮದುವೆ ನಿಷೇಧಿಸಲಾಗಿದೆ. ಇವರಲ್ಲಿ ವಿವಾಹ ವಿಚ್ಛೇಧನೆ ಮಾಡಿಕೊಂಡ ಮಹಿಳೆ ಪುನಃ ವಿವಾಹ ಆಗುವಂತಿಲ್ಲ. ಇವರು ಪಾಟಲಮ್ಮನನ್ನು ಪೂಜಿಸುತ್ತಾರೆ.

ಇವರ ಜಾತಿಕಟ್ಟೆ, ಕಟ್ಟಳೆಗಳನ್ನು ಆಚರಿಸುವುದಕ್ಕೆ. ಈ ಜಾತಿಯ ಕಟ್ಟೆ, ಕಟ್ಟಳೆಗಳನ್ನು ನೋಡಿಕೊಳ್ಳುವುದಕ್ಕೆ ಕಟ್ಟೆ ಮನೆಗಳಿವೆ. ಈ ಕಟ್ಟೆ ಮನೆ ಅಧಿಕಾರಿಯನ್ನು ಯಜಮಾನನೆಂದು ಕರೆಯುತ್ತಾರೆ. ಹಲವಾರು ಕಟ್ಟೆ ಮನೆಗಳು ಸೇರಿ ನಾಡು ಆಗುತ್ತದೆ. ಮನೆಗಳು ಅದರ ಯಜಮಾನನನ್ನು ಗೌಡ ಅಥವಾ ಗೌಡ ಎಂದು ಕರೆಯುತ್ತಾರೆ. ಜಗಳಗಳನ್ನು ಮೇಲ್ಮನವಿಯನ್ನು ಸ್ವೀಕರಿಸಿ ತೀರ್ಮಾನ ಕೊಡುತ್ತಾರೆ. ನಾಡು ಗೌಡನ ತೀರ್ಪೇ ಅಂತಿಮ ವಾದದ್ದು. ಮರಸ್ಸು ಒಕ್ಕಲಿಗರು ಶಿವನನ್ನು ಭೈರವೇಶ್ವರ ದೇವರ ಹೆಸರಿನಲ್ಲಿ ಪೂಜಿಸುತ್ತಾರೆ. ಇದರ ಸ್ಥಳ ಕೋಲಾರ ಜಿಲ್ಲೆಯ ಮೇವಗಲ್ ಹೋಬಳಿಯ ಸಿಟಿ ಬೆಟ್ಟದಲ್ಲಿದೆ. ಇವರು ಹೆಣವನ್ನು ಹೂಳುತ್ತಾರೆ.

ಮುಂದಿನ ಪುಟಕ್ಕೆ

## ಪದ್ಧತಿಗಳ ವ್ಯತ್ಯಾಸ

| | ಗೌಡರು | ಮರಸ್ಸು ಒಕ್ಕಲಿಗರು |
|---|---|---|
| ಭಾಷೆ | ಇವರು ತುಳು ಅರೆಗನ್ನಡ ಭಾಷೆಯನ್ನು ಮಾತನ್ನಾಡುತ್ತಾರೆ | ಇವರು ಕನ್ನಡ ಮತ್ತು ತೆಲುಗು ಭಾಷೆಯನ್ನು ಮಾತನಾಡುತ್ತಾರೆ. |
| ಗೋತ್ರ | 18 ಗೋತ್ರಗಳಿವೆ. ಇವರು ಮನುಷ್ಯನ ಗುಣ ಮತ್ತು ಜಾತಿಯನ್ನು ಹೇಳಿ ಗೋತ್ರವನ್ನು ಹೇಳುತ್ತಾರೆ. | 83 ಗೋತ್ರಗಳಿವೆ. ಇವರು ಮರಗಳ, ಬಳ್ಳಿ, ಧಾನ್ಯಗಳ ಹೆಸರನ್ನು ಹೇಳುತ್ತಾ ಗೋತ್ರವನ್ನು ಹೇಳುತಾರೆ. |
| ಉಪಜಾತಿ | ಗೌಡರಿಗೆ ಉಪ ಜಾತಿಗಳಿಲ್ಲ. | 1) ಇವರಲ್ಲಿ ಶಾಮ ಸಾಲು<br>2) ತಿರಲೆ ಘಟ್ಟ ಸಾಲು<br>3) ಶೆಟ್ಟಿಗಾರು ಸಾಲು ಎಂಬ ಉಪಜಾತಿಗಳಿವೆ. |
| ಆರಾಧನೆ | ಇವರು ವೆಂಕಟರಮಣನನ್ನು ಮನೆ ದೇವರಾಗಿ ಪೂಜಿಸುತ್ತಾರೆ. ಇವಲ್ಲದೆ ಚಾಮುಂಡೇಶ್ವರಿ, ಗುಳಿಗ, ಪಂಜರುಳಿ, ಪಾಶಾಣ ಮೂರ್ತಿ ಮುಂತಾದ ಭೂತಗಳನ್ನು ಆರಾಧಿಸುತ್ತಾರೆ. | ಇವರು ಪಟ್ಟಾಲಮ್ಮನನ್ನು ಪೂಜಿಸುತ್ತಾರೆ. |
| ಶವ ಸಂಸ್ಕಾರ | ಇವರು ಸತ್ತವರನ್ನು ಸುಡುತ್ತಾರೆ. | ಇವರು ಸತ್ತವರನ್ನು ಹೂಳುತ್ತಾರೆ.<br>**ಲೇ. ಪ್ರೊ|| ಪೂಜಾರಿ ಮೊಣ್ಣಪ್ಪ.** |

*ಬಾಲ ಸಂಗಾತಿ ವಿಭಾಗ - ಕಳೆದ ಸಂಚಿಕೆಂದ ಮುಂದು ವರ್ದದೆ ಜ್ಞಾನ - 4*
*ಶಾಲೆಲಿ ಹೇಳಿ ಕೊಟ್ಟದ್ದೆಲ್ಲಾ ನಿಜ ಅಲ್ಲ*

## ಬೀಜ ಗಣಿತ

ಪ್ರಾಚೀನ ಗ್ರಂಥಗಳ ಆಳ ಆಗಿ ವಿಮರ್ಶಿಸುತ್ತಾ ಹೋದರೆ ವೇದಾಂಗತ್ತೇಳುವ ಶುಲ್ಬ ಸೂತ್ರಗಳೇ ಬೀಜ ಗಣಿತಕ್ಕೆ ಮೂಲವೆಂದು ತಿಳಿದ್ದ್ ಬಂದದೆ. ರೂಪರೇಖಾ ನಿರ್ಣಯ (Salution of Linear) ಹಾಗು ಯೌಗ ಪದ್ಯಿಕ ಸಮೀಕರಣ (Simultoneous Equations) ಈ ಎರಡೂ ವಿಷಯಲೂ ಭಾರತೀಯ ಬೀಜಗಣಿತಲಿ ಸಾಕಷ್ಟ್ ಚರ್ಚೆಗ ಆವುಟು. ಈಗಲೂ ಯಜ್ಞ- ಯಾಗಾದಿಗಳ ಸಂದರ್ಭಲಿ ನಿರ್ಮಾಣ ಮಾಡ್ವ ಯಜ್ಞಕುಂಡಗಳ ರಚನೆಲೆ ಬೀಜಗಣಿತದ ವಿಕಾಸನ ನಾವು ಗುರ್‌ತಿಸಕ್.

ಕ್ರಿ. ಶ. 700ರಲ್ಲಿದ್ದ ಬ್ರಹ್ಮಗುಪ್ತನ ಕಾಲಲಿ ಬೀಜ ಗಣಿತನ ಕುಟ್ಟಗಣಿತ ಬೀಜ ಗಣಿತ, ಅವ್ಯಕ್ತ ಗಣಿತ ಇತ್ಯಾದಿ, ಸರಿಯಾದ ಪದಗಳು ಕರೆತಿದ್ದೊ. ಬಹುಶ: ಆ ಕಾಲಲಿ ಬೀಜಗಣಿತ ವಿಭಿನ್ನ ಪ್ರದೇಶಲಿ ಬೇರೆ ಬೇರೆ ಹೆಸರ್‌ಲಿ ಪ್ರಸಿದ್ಧ ಆಗಿತ್ತ್ ಕಂಡದೆ.

ವರ್ಗೀಯ ಸಮೀಕರಣ: $ax^2 + bx + c= 0$ ಈ ಸೂತ್ರನ ಬಿಡ್‌ಸುವ ಕ್ರಮನ ಆರ್ಯಭಟ, ಬ್ರಹ್ಮಗುಪ್ತ, ಮುಂತಾದವು ತಿಳಿದಿದ್ದೊ, ವರ್ಗೀಯ ಸಮೀಕರಣನ ಬಿಡ್‌ಸಿಕೆ ಈಗ ಅನುಸರಿಸ್ತ್ತಿರುವ ಕ್ರಮನೇ 10 ನೇ ಶತಮಾನಲಿ ಶ್ರೀಧರಾಚಾರ್ಯರು ಕಂಡು ಕೊಂಡಿದ್ದೊ. ಅವರ ಶ್ಲೋಕ ಹಿಂಗುಟ್ಟು.

ಚತುರಾಹತ ವರ್ಗಸಮ್ಯೆ: ರೂಪೈ: ಪಕ್ಷದ್ವಯಂ ಗುಣಯೇತ್।
ಅವ್ಯಕ್ತ ವರ್ಗರೂಪೈ : ಉಕ್ತಾ ಪಕ್ಷಾ ತತೋ ಮೂಲಮ್||

ಕ್ರಮಯೋಜನೆ ಮತ್ತು ಸಂಯೋಜನೆ :
(Permutation and combination)

ಕ್ರಮಯೋಜನೆ ಮತ್ತು ಸಂಯೋಜನೆಗೆ ಸಂಬಂಧ ಪಟ್ಟ ಗಣಿತ ಪದ್ಧತಿನ ಪ್ರಾಚೀನ ಕಾಲದಿಂದನೂ ಭಾರತಲಿ ಬಳ್‌ಸಲಾಗ್‌ತ್ತಿತ್. ಈ ಎರಡ್ ಪದ್ಧತಿನ ಪ್ರಮುಖವಾಗಿ ಕಾವ್ಯ ನಿರ್ಣಯವಲೂ, ವಾಸ್ತು ಶಾಸ್ತ್ರಲೂ ಸಂಗೀತ ಶಾಸ್ತ್ರಲೂ ಮತ್ತೆ ಔಷಧಿಗಳ್ನ ತಯಾರಿಸುದಲ್ಲೂ ಉಪಯೋಗಿಸಲಾಗ್‌ತ್ತಿತ್.

$$NCR = \frac{n (n-2)......(n-n+1)}{1-2-3.....R}$$

ಈ ಸಾಧಾರಣ ಸೂತ್ರನ ಒಂಭತ್ತನೇ ಶತಮಾನಲಿ ಕರ್ನಾಟಕದ ಗಣಿತಜ್ಞರಾದ ವರಾಹ ಮಿಹಿರಾಚಾರ್ಯರು ಶ್ಲೋಕಲಿ ಬರ್‌ದಿಟ್ಟಿಳೊ.

ಏಕಾದ್ಯೆಕೋತ್ತರತ: ಪದಮೂರ್ಧ್ವಾದರ್ಯತ: ಕ್ರಮಾತ್ ಕ್ರಮಶ :। ಸ್ಥಾಪ್ಯ ಪ್ರತಿಲೋಮಘುನಂ ಪ್ರತಿಲೋಮಘುನೇನ ಬಾಜಿತಂ ಸಾರಮ್||

ವೇದ ಕಾಲಲಿದ್ದ ಋಷಿಮುನಿಗ ನಾನಾ ತರದ ಯಜ್ಞ- ಯಾಗಾದಿಗಳ ಮಾಡ್‌ತ್ತಿದ್ದೊ. ಆಗ ಅವುಗಳ ಬೇರೆ ಬೇರೆ ವೇದಿಕೆನ ನಿರ್ಮಾಣ ವಿಷಯಲಿ ಸಮಸ್ಯೆಗ ಆಗ್‌ತಿತ್. ಇಂತಹ ಸಮಸ್ಯೆಗಳ್ನ ನಿವಾರಿಸಿಕೆ ಜ್ಯಾಮಿತಿನ ಬಳ್‌ಸ್‌ತ್ತಿದ್ದೊ. ಯಾಕೆ ತ್ತೇಳ್ರೆ ಜ್ಯಾಮಿತಿಂದ ಭೂಮಿಗೆ ಸಂಬಂಧ ಪಟ್ಟ ಅನೇಕ ವಿಷಯಗ ಸ್ಪಷ್ಟ ಆಗ್‌ತ್ತಿತ್.

**ಮುಂದುವರ್ದದೆ, ಬಿಟ್ಟೀರ ಚೊಂದಮ್ಮ.**

ದಿ|| ಬಿ. ಕೆ. ಬೆಳ್ಳಿಯಪ್ಪ



# ಕೃತಜ್ಞತೆಗಳು

ದಿನಾಂಕ 4-8-2002 ರಂದು ಅರುಣಾಚಲದಲ್ಲಿ ಸೇನೆಯ ಕರ್ತವ್ಯದಲ್ಲಿ ಇದ್ದಾಗ, ದುರ್ಮರಣಕ್ಕೆ ಈಡಾಗಿ ಸ್ವರ್ಗಸ್ಥರಾದ ಸುಬೇದಾರ್ ಬೆಳ್ಳಿಯಪ್ಪನವರ ಅಂತ್ಯಕ್ರಿಯೆಯಲ್ಲಿ ಭಾಗವಹಿಸಿ ದುಃಖದಲ್ಲಿ ಪಾಲುದಾರರಾಗಿ ಸಂತೈಸಿದ ಭಾರತ.ಸೇನೆಯ ಅಧಿಕಾರಿಗಳಿಗೂ, ಕರ್ನಾಟಕ ಸರ್ಕಾರದ ಪೊಲೀಸ್ ಮತ್ತು ಕಂದಾಯ ಅಧಿಕಾರಿಗಳಿಗೂ, ಅಂತ್ಯಕ್ರಿಯೆಯಲ್ಲಿ ಆತ್ಮಶಾಂತಿಗಾಗಿ ನಡೆಸಿದ ಮಂತ್ರ ಪಟಿಸಿದ ಸ್ವಾಮೀಜಿಯವರಿಗೂ, ರಾಜಕೀಯ ಮುಖಂಡರಿಗೂ, ಪಿರಿಯಾಪಟ್ಟಣದ ಸಂಘ, ಸಂಸ್ಥೆಯವರಿಗೂ ಮತ್ತು ನೆರೆದ ಅಪಾರ ಬಂಧು ಮಿತ್ರ ಬಳಗದವರಿಗೆ ಮತ್ತು ಕುಟುಂಬಸ್ತರಿಗೂ ಕೃತಜ್ಞತೆಗಳು.

ದುಃಖತಪ್ತ ತಂದೆ : ಕುಯ್ಯಮುಡಿ ಪೊನ್ನಪ್ಪ, ತಾಯಿ ಚಂದ್ರಮ್ಮ.
ಪತ್ನಿ: ಕೆ. ಪಿ. ಕವಿತ, ಪುತ್ರರಾದ ಭುವನ್, ಪವನ್
ಸಹೋದರರಾದ ರಾಜ, ಜಯಕುಮಾರ್ ಮತ್ತು ಅಶ್ವಥ, ಸಹೋದರಿಯರು,
ಭಾವಂದಿರು ಮತ್ತು ಅತ್ತಿಗೆಯವರು.

# 4ನೇ ವರ್ಷದ ಪುಣ್ಯಸ್ಮರಣೆ



ಮರಣ : 14-8-1998

ದಿ|| ಪಾಣತ್ತಲೆ ಗಣಪತಿ ಸೋಮಪ್ಪ

ನೀವು ನಮ್ಮನ್ನಗಲಿ ನಾಲ್ಕು ವರ್ಷಗಳೇ ಕಳೆದರು ನಿಮ್ಮ ನೆನಪು, ಪ್ರೀತಿ ವಾತ್ಸಲ್ಯ ಹಾಗೂ ಆದರ್ಶ ಗುಣಗಳು ಅಚ್ಚಳಿಯದೆ ಉಳಿದು ನಿತ್ಯವೂ ಪ್ರತಿಧ್ವನಿಸುತ್ತಿರುವ ನಿಮ್ಮ ಹಿತ ನುಡಿಗಳು ಆಗಿಂದಾಗ್ಯೆ ಮರು ಕಳಿಸುತ್ತಿದ್ದು ನಮ್ಮ ಕಣ್ಣಂಚಿನಲ್ಲಿ ಕಂಬನಿ ಮಿಂಚಿ ಹರಿದು ನಿಮ್ಮ ಆಗಲಿಕೆಯ ನೋವನ್ನು ತರುತಿದೆ.

ನಿಮ್ಮ ನಿಷ್ಕಲ್ಮಶ ಆತ್ಮಕ್ಕೆ ಆ ಭಗವಂತನು ಚಿರಶಾಂತಿಯನ್ನು ಕರುಣಿಸಲಿ ಎಂದು ಅನುದಿನವೂ ಪ್ರಾರ್ಥಿಸುತ್ತಿರುವೆವು.

ದುಃಖ ತಪ್ತ ಪತ್ನಿ: ಕಮಲಾಕ್ಷಿ, ಮಕ್ಕಳು : ಕವಿತ, ಸವಿತ, ರೋಷನ್ (ರಾಜ)
ಅಳಿಯಂದಿರು : ಹರೀಶ್, ಸತೀಶ್, ಮೊಮ್ಮಗ ಕೃತಿಕ್ (ಸೋಮ)
ಹಾಗೂ ಅಪಾರ ಬಂಧು ಬಳಗದವರು.

ಬೆಂಗಳೂರು.

Reg. No. KA/SK/MYS-88 Registered : 10-01-96 TCI Kar. 09592

# ಕೊಡಗು ದಕ್ಷಿಣ ಕನ್ನಡ ಗೌಡ ಸಮಾಜ (ರಿ.)

ಬೆಂಗಳೂರು, ರಿಜಿಸ್ಟರ್ಡ್ ನಂ. 265/69-70

'ಒಂದನೇ 'ಸಿ' ಮುಖ್ಯ ರಸ್ತೆ, ಗಂಗಾನಗರ ಬಡಾವಣೆ, ಬೆಂಗಳೂರು - 560 032

## ವಾರ್ಷಿಕ ಮಹಾಸಭೆ ಮತ್ತು ಕೈಲು ಮುಹೂರ್ತ ಹಬ್ಬದ ಪರವಾಗಿ

a) ವಾರ್ಷಿಕ ಕ್ರೀಡಾಕೂಟ : ದಿನಾಂಕ : **1-9-02 ನೇ ಭಾನುವಾರ ಪೂ : 8-00 ಗಂಟೆಗೆ**
ಸ್ಥಳ : ಬಿ. ಇ. ಎಲ್. ಅಂಬೇಡ್ಕರ್ ಕ್ರೀಡಾಂಗಣ, ಜಾಲಹಳ್ಳಿ ಬೆಂಗಳೂರು.

b) ಸಾಂಸ್ಕೃತಿಕ ಸ್ಪರ್ಧೆ : ದಿನಾಂಕ : **8-9-02 ನೇ ಭಾನುವಾರ ಅಪರಾಹ್ನ 1-00 ಗಂಟೆಗೆ**
ಸ್ಥಳ : ಯುವನಿತ, ನೃಪತುಂಗ ರಸ್ತೆ, (ರಿಸರ್ವ್ ಬ್ಯಾಂಕ್ ಹತ್ತಿರ) ಬೆಂಗಳೂರು.

c) ವಾರ್ಷಿಕ ಮಹಾಸಭೆ ಮತ್ತು ಕೈಲು ಮೂಹೂರ್ತ ಹಬ್ಬ : ದಿನಾಂಕ : **22-9-02 ನೇ ಭಾನುವಾರ, ಪೂರ್ವಾಹ್ನ 9-00 ಗಂಟೆಗೆ**
ಸ್ಥಳ : ಗೃಹಲಕ್ಷ್ಮಿ ಬಡಾವಣೆ, ನೆಲಗದರನಹಳ್ಳಿ, ಪೀಣ್ಯ , ಬೆಂಗಳೂರು.
(ಹೊಸದಾಗಿ ಕೊಂಡುಕೊಂಡ ನಿವೇಶನ)

ಅಧ್ಯಕ್ಷತೆ : ***ಶ್ರೀಮಾನ್ ಕುರುಂಜಿ ವೆಂಕಟ್ರಮಣ ಗೌಡ***
(ಅಧ್ಯಕ್ಷರು, ಅಕಾಡೆಮಿ ಆಫ್ ಲಿಬರಲ್ ಎಜುಕೇಷನ್ (ರಿ.) )

ಮುಖ್ಯ ಅತಿಥಿಗಳು : ***ಶ್ರೀಮಾನ್ ಡಿ. ವಿ. ಬಸವೇಗೌಡ***
(ಅಧ್ಯಕ್ಷರು, ಒಕ್ಕಲಿಗ ಸಂಘ, ಬೆಂಗಳೂರು)

ಅತಿಥಿಗಳು : ***a) ಶ್ರೀಮಾನ್ ಕೋಳಂಬೆ ಚಿದಾನಂದ ಗೌಡ***
(ಉಪಕುಲಪತಿ, ಕುವೆಂಪು ವಿಶ್ವವಿದ್ಯಾನಿಲಯ, ಶಿವಮೊಗ್ಗ)
***b) ಶ್ರೀಮಾನ್ ಕೆ. ಎಸ್. ಉಲ್ಲಾಸ್.***
(ನಿವೃತ್ತ, ಡಿ. ವೈ. ಎಸ್. ಪಿ.)
***c) ಡಾ|| ಎಂ. ಎನ್ ಬೋಜಮ್ಮ, ಪ್ರಸಿದ್ಧ ವೈದ್ಯೆ.***
ಸಿಟಿ ಆಸ್ಪತ್ರೆ, ಬೆಂಗಳೂರು.

ಮಾನ್ಯ ಸದಸ್ಯರು ಹಾಗೂ ಸಮಾಜದ ಬಂಧು ಬಾಂಧವರು ಸಮಯಕ್ಕೆ ಸರಿಯಾಗಿ ಆಗಮಿಸಿ ಸಮಾರಂಭ ಹಾಗೂ ಸ್ಪರ್ಧೆಗಳನ್ನು ಯಶಸ್ವಿಗೊಳಿಸಬೇಕಾಗಿ ವಿನಂತಿ.

ಆಡಳಿತ ಮಂಡಳಿಯ ಪರವಾಗಿ

ಶ್ರೀ ದಂಬೆಕೋಡಿ ಆನಂದ
ಅಧ್ಯಕ್ಷರು

ಶ್ರೀ ನಂಗಾರು ನಿಂಗರಾಜು
ಗೌರವ ಕಾರ್ಯದರ್ಶಿ.

## ಪತ್ರಿಕೋದ್ಯಮ

ನಮ್ಮ ಜನಾಂಗದಲ್ಲಿ ಸಾಕಷ್ಟು ವಿದ್ಯಾವಂತರಿರುವುದು ಸರಿಯಷ್ಟೆ, ಮತ್ತು ಜನಾಂಗದಲ್ಲಿ ಪತ್ರಿಕೋದ್ಯಮದ ವಿಷಯವನ್ನು ತೆಗೆದುಕೊಂಡು ಪದವಿ ಪಡೆದಿರುವ ಮತ್ತು ಪದವಿ ಪಡೆಯುತ್ತಿರುವ ಅಭ್ಯರ್ಥಿಗಳು ತಮ್ಮ ಬಯೋಡಟ (Bio-Data) ವನ್ನು ಸಂಗಾತಿಗೆ ಕೂಡಲೆ ಕಳುಹಿಸಿಕೊಟ್ಟಲ್ಲಿ ಮುಂದೆ ನಮ್ಮದೇ ಆದ ಪತ್ರಿಕೋದ್ಯಮ ವೇದಿಕೆಯನ್ನು ರಚಿಸಲು ಸಹಕರಿಸುವಂತೆ ವಿನಂತಿ.

*-ಸಂಪಾದಕ*

## ಡಾ|| ಗುಡ್ಡೆಮನೆ ಅಪ್ಪಯ್ಯ ಗೌಡ ಸ್ಮರಣಾರ್ಥ ಕಾದಂಬರಿ ರಚನೆ.

1837 ರ ಅಕ್ಟೋಬರ್ 31 ರಲ್ಲಿ ಡಾ|| ಗುಡ್ಡೆಮನೆ ಅಪ್ಪಯ್ಯಗೌಡರನ್ನು ಮಡಿಕೇರಿಯ ಕೋಟೆಯೊಳಗಿನ ಬಾವಿಕಟ್ಟೆಯಲ್ಲಿ ಬ್ರಿಟಿಷರು, ಸರ್ವನಾಡ ಪಟೇಲರನ್ನು, ಸ್ಥಳೀಯರನ್ನು ಬರಮಾಡಿಸಿ ನೇಣು ಗಂಬಕ್ಕೇರಿಸುವುದು ಇಂದು ಇತಿಹಾಸವಾಗಿದೆ. ದೇಶದ ಇತಿಹಾಸದ ಪುಟಗಳನ್ನು ತಿರುವಿದಾಗ ಎರಡನೆ ಸ್ವಾತಂತ್ರ್ಯ ದಂಗೆ ಎಂದು ಪರಿಗಣಿಸಲ್ಪಡುವ ಅಮರ ಸುಳ್ಯ ಸ್ವಾತಂತ್ರ್ಯ ದಂಗೆಯ ರೂವಾರಿಗಳ ಚರಿತ್ರೆಯನ್ನೇ ಕಾದಂಬರಿ ರೂಪದಲ್ಲಿ ಛಟ್ಟಿ ಇಳಿಸಲು ಪರಿಣಿತ ಕಾದಂಬರಿಗಾರರಾದ ಸರ್ಪಗಂಧ ಖ್ಯಾತಿಯ ಕೌಂಡಿನ್ಯರವರ ಮೂಲಕ ಬರೆಯಿಸಲು ನಿರ್ಧರಿಸಿದ್ದರಿಂದ, ಈ ಮೇಲಿನ ವಿಷಯಕ್ಕೆ ಸಂಭವಿಸಿದಂತೆ, ಸಿಗಲಿರುವ/ ತಿಳಿದಿರುವ ಮಾಹಿತಿಯನ್ನು ದಿನಾಂಕ 31-10-02ರ ಒಳಗೆ ತಪ್ಪದೆ ಕೊಡಗು ಸಂಗಾತಿ ಕಛೇರಿಗೆ ತಲುಪಿರುವಂತೆ ಕೋರಿದೆ.

*- ಸಂಪಾದಕ*

**Kodagu Sangathi** Kannada Fortnightly Edited, Published, Printed by **Pattada Sheelamani, 1055c, Doddanna Buildings, Hunsur Road, Hinkal Post, Mysore-570017. ☎ : 0821/404290.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.